32



# ವುದೂ

## ನಿರ್ವಹಿಸುವುದು ಹೇಗೆ?






مدرسة الصفة الإسلامية

**MADRASATU SUFFAH AL ISLAMIYYA**

SKYWAY COMPLEX, 6TH BLOCK, KRISHNAPURA,
SURATKAL, MANGALORE - 575 014
PH: 0824-2271449 MOB: 8722695551

ಸಹೃದಯರೊಬ್ಬರು ತಮ್ಮ
ತಂದೆ–ತಾಯಿಯ ಹೆಸರಲ್ಲಿ
ನೀಡಿದ ಧನಸಹಾಯದಿಂದ
ಈ ಪುಸ್ತಕವನ್ನು ರಚಿಸಲಾಗಿದೆ.
ಅಲ್ಲಾಹು ಅವರಿಗೂ ಅವರ
ತಂದೆ–ತಾಯಿಗಳಿಗೂ
ಪಾಪಮುಕ್ತಿಯನ್ನು ದಯಪಾಲಿಸಿ
ಸ್ವರ್ಗಲೋಕಕ್ಕೆ ಪ್ರವೇಶ ಮಾಡಿಸಲಿ
–ಆಮೀನ್

## ವುದೂ ಎಂದರೇನು?

- ಭಾಷಿಕ ಅರ್ಥ: 'ವುದೂ' (وُضُوء) ಎಂಬ ಪದವು 'ವದಾಅ' (وَضَاءَة) ಎಂಬ ಪದದಿಂದ ಬಂದಿದೆ. ಭಾಷಿಕ ಅರ್ಥದಲ್ಲಿ 'ವುದೂ' ಎಂದರೆ ಶುಚಿತ್ವ, ಸೌಂದರ್ಯ ಮತ್ತು ಹೊಳಪು. 'ವುದೂ' (وُضُوء) ಎಂದರೆ ನಾವು ನಿರ್ವಹಿಸುವ ವುದೂ. 'ವದೂ' (وَضُوء) ಎಂದರೆ ವುದೂ ನಿರ್ವಹಿಸಲು ಬಳಸುವ ನೀರು.

- ಧಾರ್ಮಿಕ ಅರ್ಥ: ಧಾರ್ಮಿಕ ಅರ್ಥದಲ್ಲಿ 'ವುದೂ' ಎಂದರೆ ಅಲ್ಲಾಹನ ಆರಾಧನೆ ಮಾಡುತ್ತೇನೆ ಎಂಬ ನಿಯತ್ತಿನೊಂದಿಗೆ ನೀರು ಬಳಸಿ ದೇಹದ ನಿರ್ದಿಷ್ಟ ಅಂಗಗಳನ್ನು ತೊಳೆಯುವುದು ಅಥವಾ ಸವರುವುದು.

## ನಿಯಮ

- ಚಿಕ್ಕ ಅಶುದ್ಧಿಯಲ್ಲಿರುವವರು ನಮಾಝ್ ನಿರ್ವಹಿಸಲು ಬಯಸಿದರೆ ವುದೂ ನಿರ್ವಹಿಸುವುದು ಕಡ್ಡಾಯವಾಗಿದೆ. ಏಕೆಂದರೆ ಅಲ್ಲಾಹು ಹೇಳುತ್ತಾನೆ:

﴿يَٰٓأَيُّهَا ٱلَّذِينَ ءَامَنُوٓاْ إِذَا قُمۡتُمۡ إِلَى ٱلصَّلَوٰةِ فَٱغۡسِلُواْ وُجُوهَكُمۡ وَأَيۡدِيَكُمۡ إِلَى ٱلۡمَرَافِقِ وَٱمۡسَحُواْ بِرُءُوسِكُمۡ وَأَرۡجُلَكُمۡ إِلَى ٱلۡكَعۡبَيۡنِۚ﴾

"ಓ ಸತ್ಯವಿಶ್ವಾಸಿಗಳೇ! ನೀವು ನಮಾಝ್ ನಿರ್ವಹಿಸಲು ಬಯಸಿದರೆ ನಿಮ್ಮ ಮುಖಗಳನ್ನು ತೊಳೆಯಿರಿ, ಕೈಗಳನ್ನು ಮೊಣಕೈಗಳವರೆಗೆ ತೊಳೆಯಿರಿ, ತಲೆಯನ್ನು ಸವರಿರಿ ಮತ್ತು ಕಾಲುಗಳನ್ನು ಹರಡುಗಂಟುಗಳ

ತನಕ ತೊಳೆಯಿರಿ."[1]

- ವುದೂ ನಮಾಝಿನ ಷರತ್ತುಗಳಲ್ಲಿ ಒಂದಾಗಿದ್ದು, ವುದೂ ನಿರ್ವಹಿಸದೆ ನಮಾಝ್ ಮಾಡಿದರೆ ನಮಾಝ್ ಸಿಂಧುವಾಗುವುದಿಲ್ಲ.

عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «لَا يَقْبَلُ اللَّهُ صَلَاةَ أَحَدِكُمْ إِذَا أَحْدَثَ حَتَّى يَتَوَضَّأَ.»

ಅಬೂ ಹುರೈರ(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ನಿಮ್ಮಲ್ಲಿ ಯಾರಾದರೂ ಚಿಕ್ಕ ಅಶುದ್ಧಿಯಲ್ಲಿದ್ದರೆ ಅವರು ವುದೂ ನಿರ್ವಹಿಸುವ ತನಕ ಅಲ್ಲಾಹು ಅವರ ನಮಾಝುನ್ನು ಸ್ವೀಕರಿಸುವುದಿಲ್ಲ."[2]

---

1 ಸೂರ ಅಲ್‌ಮಾಇದ 6

2 ಅಲ್‌ಬುಖಾರಿ, ಮುಸ್ಲಿಂ

عَنْ عَلِيِّ بْنِ أَبِي طَالِبٍ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «مِفْتَاحُ الصَّلَاةِ الطُّهُورُ».

ಅಲಿ ಇಬ್ನ್ ಅಬೂ ತಾಲಿಬ್(﵁) ವರದಿ: ಪ್ರವಾದಿ(ﷺ) ಯವರು ಹೇಳಿದರು: "ನಮಾಝ್‌ನ ಕೀಲಿಕೈ ಶುದ್ಧಿಯಾಗಿದೆ."[3]

## ಎಲ್ಲಾ ನಮಾಝ್‌ಗಳಿಗೂ ವುದೂ ನಿರ್ವಹಿಸುವುದು ಅಪೇಕ್ಷಣೀಯವಾಗಿದೆ

- ಚಿಕ್ಕ ಅಶುದ್ಧಿ ಇಲ್ಲದಿದ್ದರೂ ಸಹ ಎಲ್ಲಾ ಕಡ್ಡಾಯ ನಮಾಝ್‌ಗಳಿಗೂ ಹೊಸದಾಗಿ ವುದೂ ನಿರ್ವಹಿಸುವುದು ಅಪೇಕ್ಷಣೀಯವಾಗಿದೆ.

عَنْ أَنَسِ بْنِ مَالِكٍ رَضِيَ اللَّهُ عَنْهُ أَنَّ النَّبِيَّ

3 ಅಹ್ಮದ್, ಅತ್ತಿರ್ಮಿದಿ, ಅಬೂದಾವೂದ್, ಇಬ್ನ್ ಮಾಜ

صَلَّى اللَّهُ عَلَيْهِ وَسَلَّمَ قَالَ: كَانَ النَّبِيُّ صَلَّى اللَّهُ عَلَيْهِ وَسَلَّمَ يَتَوَضَّأُ عِنْدَ كُلِّ صَلَاةٍ. قُلْتُ: كَيْفَ كُنْتُمْ تَصْنَعُونَ؟ قَالَ: يُجْزِئُ أَحَدَنَا الْوُضُوءُ مَا لَمْ يُحْدِثْ.

ಅನಸ್ ಇಬ್ನ್ ಮಾಲಿಕ್(﵁) ಹೇಳುತ್ತಾರೆ: ಪ್ರವಾದಿ(ﷺ) ಯವರು ಎಲ್ಲಾ ನಮಾಝ್‌ಗಳಿಗೂ ಮುಂಚೆ (ಹೊಸದಾಗಿ) ವುದೂ ನಿರ್ವಹಿಸುತ್ತಿದ್ದರು. ವರದಿಗಾರರಲ್ಲಿ ಒಬ್ಬರು ಕೇಳುತ್ತಾರೆ: "ನೀವೇನು ಮಾಡುತ್ತಿದ್ದಿರಿ?" ಆಗ ಅನಸ್(﵁) ಹೇಳಿದರು: "ಚಿಕ್ಕ ಅಶುದ್ಧಿ ಉಂಟಾಗದಿದ್ದರೆ ನಮಗೆ ಆ ವುದೂ (ಹಳೆಯ ವುದೂ) ಸಾಕಾಗುತ್ತಿತ್ತು."[4]

4 ಅಲ್‌ಬುಖಾರಿ

## ವುದೂವಿನ ಶ್ರೇಷ್ಠತೆಗಳು

- ವುದೂವಿನ ಮೂಲಕ ಪಾಪಗಳನ್ನು ಅಳಿಸಲಾಗುತ್ತದೆ.

عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «إِذَا تَوَضَّأَ الْعَبْدُ الْمُسْلِمُ — أَوِ الْمُؤْمِنُ — فَغَسَلَ وَجْهَهُ، خَرَجَ مِنْ وَجْهِهِ كُلُّ خَطِيئَةٍ نَظَرَ إِلَيْهَا بِعَيْنَيْهِ مَعَ الْمَاءِ — أَوْ مَعَ آخِرِ قَطْرِ الْمَاءِ — فَإِذَا غَسَلَ يَدَيْهِ خَرَجَ مِنْ يَدَيْهِ كُلُّ خَطِيئَةٍ كَانَ بَطَشَتْهَا يَدَاهُ مَعَ الْمَاءِ — أَوْ مَعَ آخِرِ قَطْرِ الْمَاءِ — فَإِذَا غَسَلَ رِجْلَيْهِ خَرَجَتْ كُلُّ خَطِيئَةٍ مَشَتْهَا رِجْلَاهُ مَعَ الْمَاءِ — أَوْ مَعَ آخِرِ قَطْرِ الْمَاءِ — حَتَّى يَخْرُجَ نَقِيًّا مِنَ

الذُّنُوبِ.»

ಅಬೂ ಹುರೈರ(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: “ಒಬ್ಬ ಮುಸಲ್ಮಾನ ದಾಸ – ಅಥವಾ ಸತ್ಯವಿಶ್ವಾಸಿ ದಾಸ – ವುದೂ ನಿರ್ವಹಿಸುತ್ತಾ ತನ್ನ ಮುಖವನ್ನು ತೊಳೆಯುವಾಗ, ಅವನು ತನ್ನ ಕಣ್ಣುಗಳ ಮೂಲಕ ನೋಡಿದ ಎಲ್ಲಾ ಪಾಪಗಳೂ ಆ ನೀರಿನೊಂದಿಗೆ – ಅಥವಾ ಆ ನೀರಿನ ಕೊನೆಯ ಬಿಂದುವಿನೊಂದಿಗೆ –ತೊಳೆದು ಹೋಗುತ್ತವೆ. ಅವನು ಕೈಗಳನ್ನು ತೊಳೆಯುವಾಗ, ಅವನು ತನ್ನ ಕೈಗಳ ಮೂಲಕ ಮಾಡಿದ ಪಾಪಗಳೆಲ್ಲವೂ ಆ ನೀರಿನೊಂದಿಗೆ – ಅಥವಾ ಆ ನೀರಿನ ಕೊನೆಯ ಬಿಂದುವಿನೊಂದಿಗೆ –ತೊಳೆದು ಹೋಗುತ್ತವೆ. ಅವನು ತನ್ನ ಕಾಲುಗಳನ್ನು ತೊಳೆಯುವಾಗ, ಅವನು ತನ್ನ ಕಾಲುಗಳಿಂದ ಮಾಡಿದ ಪಾಪಗಳೆಲ್ಲವೂ ಆ ನೀರಿನೊಂದಿಗೆ – ಅಥವಾ ಆ ನೀರಿನ ಕೊನೆಯ ಬಿಂದು-

ವಿನೊಂದಿಗೆ –ತೊಳೆದು ಹೋಗುತ್ತವೆ. ಹೀಗೆ (ವುದೂ ಮುಗಿಯುವಾಗ) ಅವನು ಎಲ್ಲಾ ಪಾಪಗಳಿಂದಲೂ ಶುದ್ಧನಾಗುತ್ತಾನೆ."[5]

## ಸದಾ ವುದೂ ನಿರ್ವಹಿಸಿದ ಸ್ಥಿತಿಯಲ್ಲಿರುವುದರ ಶ್ರೇಷ್ಠತೆ

- ಸದಾ ವುದೂ ನಿರ್ವಹಿಸಿದ ಸ್ಥಿತಿಯಲ್ಲಿರುವುದು ಸತ್ಯ ವಿಶ್ವಾಸದ (ಈಮಾನಿನ) ಚಿಹ್ನೆಯಾಗಿದೆ.

عَنْ ثَوْبَانَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «اسْتَقِيمُوا وَلَنْ تُحْصُوا. وَاعْلَمُوا أَنَّ خَيْرَ أَعْمَالِكُمُ الصَّلَاةُ. وَلَنْ يُحَافِظَ عَلَى الْوُضُوءِ إِلَّا مُؤْمِنٌ.»

ಸೌಬಾನ್(﵁) ರಿಂದ ವರದಿ: ಪ್ರವಾದಿ(ﷺ) ಯವರು

5 ಮುಸ್ಲಿಂ

ಹೇಳಿದರು: "ಎಲ್ಲಾ ಒಳಿತುಗಳನ್ನು ಮಾಡಲು ನಿಮಗೆ ಸಾಧ್ಯವಾಗದಿದ್ದರೂ ಸಹ ಒಳಿತಿನ ಕರ್ಮಗಳೊಂದಿಗೆ ಅಂಟಿಕೊಂಡಿರಲು ಪ್ರಯತ್ನಿಸಿರಿ. ತಿಳಿಯಿರಿ! ನಿಮ್ಮ ಕರ್ಮಗಳಲ್ಲಿ ಅತ್ಯುತ್ತಮವಾದದ್ದು ನಮಾಝ್ ಆಗಿದೆ. ಸತ್ಯವಿಶ್ವಾಸಿ ಅಲ್ಲದೆ ಇನ್ನಾರಿಗೂ ಸದಾ ವುದೂ ನಿರ್ವಹಿಸಿದ ಸ್ಥಿತಿಯಲ್ಲಿ ಇರಲು ಸಾಧ್ಯವಿಲ್ಲ."[6]

- ಮಾತ್ರವಲ್ಲ, ಅದು ಸತ್ಯವಿಶ್ವಾಸದ (ಈಮಾನಿನ) ಅರ್ಧ ಭಾಗವಾಗಿದೆ.

عَنْ أَبِي مَالِكٍ الْأَشْعَرِيِّ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «الطُّهُورُ شَطْرُ الْإِيمَانِ.»

ಅಬೂ ಮಾಲಿಕ್ ಅಲ್‌ಅಶ್‌ಅರಿ(﵁) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ಶುದ್ಧಿಯು ಸತ್ಯ-

6 ಅಹ್ಮದ್

ವಿಶ್ವಾಸದ ಅರ್ಧ ಭಾಗವಾಗಿದೆ."[7]

- ಕಡ್ಡಾಯ ವುದೂವನ್ನು ಸರಿಯಾಗಿ ಪಾಲಿಸುವವರು ಮತ್ತು ಹೆಚ್ಚು ಹೆಚ್ಚು ಐಚ್ಛಿಕ ವುದೂ ನಿರ್ವಹಿಸುವವರಿಗೆ ಪುನರುತ್ಥಾನ ದಿನ ಮಹಾ ಪ್ರಕಾಶವಿರುತ್ತದೆ.

عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «إِنَّ أُمَّتِي يَأْتُونَ يَوْمَ الْقِيَامَةِ غُرًّا مُحَجَّلِينَ مِنْ أَثَرِ الْوُضُوءِ. فَمَنِ اسْتَطَاعَ مِنْكُمْ أَنْ يُطِيلَ غُرَّتَهُ فَلْيَفْعَلْ.»

ಅಬೂ ಹುರೈರ(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ನನ್ನ ಸಮುದಾಯವು ವುದೂ ನಿರ್ವಹಿಸಿದ ಪರಿಣಾಮವಾಗಿ ಪುನರುತ್ಥಾನ ದಿನ ಬೆಳ್ಳಗೆ

7 ಮುಸ್ಲಿಂ

ಬೆಳಗುವ ಪ್ರಕಾಶವಿರುವ ಮುಖ ಮತ್ತು ಕೈಕಾಲುಗಳನ್ನು ಹೊಂದಿದವರಾಗಿ ಬರುವರು. ಆದ್ದರಿಂದ ಯಾರಿಗೆ ತಮ್ಮ ಪ್ರಕಾಶವನ್ನು ದೀರ್ಘಗೊಳಿಸಲು ಸಾಧ್ಯವೋ ಅವರು ಅದನ್ನು ಮಾಡಲಿ."[8]

## ಸುನ್ನತಿನಲ್ಲಿರುವ ಪ್ರಕಾರ ವುದೂ ನಿರ್ವಹಿಸುವುದರ ಶ್ರೇಷ್ಠತೆ

- ಕುರ್‌ಆನ್ ಮತ್ತು ಸುನ್ನತಿನಲ್ಲಿ ಹೇಗೆ ವುದೂ ನಿರ್ವಹಿಸಬೇಕೆಂದು ಹೇಳಲಾಗಿದೆಯೋ ಅದೇ ರೀತಿ ವುದೂ ನಿರ್ವಹಿಸುವವರ ಪಾಪಗಳನ್ನು ಅಳಿಸಲಾಗುತ್ತದೆ ಮತ್ತು ಅವರ ಪದವಿಗಳನ್ನು ಏರಿಸಲಾಗುತ್ತದೆ.

عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «أَلَا أَدُلُّكُمْ عَلَى مَا يَمْحُو اللَّهُ بِهِ الْخَطَايَا وَيَرْفَعُ بِهِ

8 ಅಲ್‌ಬುಖಾರಿ, ಮುಸ್ಲಿಂ

الدَّرَجَاتِ؟» قَالُوا: بَلَى، يَا رَسُولَ اللَّهِ!
قَالَ: «إِسْبَاغُ الْوُضُوءِ عَلَى الْمَكَارِهِ، وَكَثْرَةُ
الْخُطَا إِلَى الْمَسَاجِدِ، وَانْتِظَارُ الصَّلَاةِ بَعْدَ
الصَّلَاةِ. فَذَلِكُمُ الرِّبَاطُ.»

ಅಬೂ ಹುರೈರ(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಕೇಳಿದರು: "ನಿಮ್ಮ ಪಾಪಗಳನ್ನು ಅಳಿಸುವ ಮತ್ತು ನಿಮ್ಮ ಪದವಿಗಳನ್ನು ಏರಿಸುವ ಒಂದು ವಿಷಯದ ಬಗ್ಗೆ ನಾನು ನಿಮಗೆ ತಿಳಿಸಿ ಕೊಡಲೇ?" ಸಹಾಬಿಗಳು ಹೇಳಿದರು: "ಓ ಪ್ರವಾದಿಯವರೇ, ತಿಳಿ-ಸಿಕೊಡಿ." ಅವರು ಹೇಳಿದರು: "ಪ್ರತಿಕೂಲ ಸನ್ನಿವೇ-ಶಗಳಲ್ಲಿ[9] ಬಹಳ ಚೆನ್ನಾಗಿ ವುದೂ ನಿರ್ವಹಿಸುವುದು, ಮಸೀದಿಗೆ ಹೆಚ್ಚು ಹೆಚ್ಚು ಹೆಜ್ಜೆ ಹಾಕುವುದು ಮತ್ತು

9 ಪ್ರತಿಕೂಲ ಸನ್ನಿವೇಶಗಳು ಎಂದರೆ ಅತಿಯಾದ ಚಳಿ, ಕಾಯಿಲೆ ಮುಂತಾದ ಸಂದರ್ಭಗಳು.

ಒಂದು ನಮಾಝ್ ನಿರ್ವಹಿಸಿದ ಬಳಿಕ ಇನ್ನೊಂದು ನಮಾಝ್‌ಗಾಗಿ ಕಾಯುವುದು. ಅದೇ ರಿಬಾತ್ (ಗಟ್ಟಿ-ಯಾಗಿ ನೆಲೆನಿಲ್ಲುವುದು)."[10]

- ವುದೂವಿನ ಮೂಲಕ ಗತ ಪಾಪಗಳನ್ನು ಕ್ಷಮಿಸಲಾ-ಗುತ್ತದೆ.

**عَنْ عُثْمَانَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «مَنْ تَوَضَّأَ هَكَذَا غُفِرَ لَهُ مَا تَقَدَّمَ مِنْ ذَنْبِهِ. وَكَانَتْ صَلَاتُهُ وَمَشْيُهُ إِلَى الْمَسْجِدِ نَافِلَةً.»**

ಉಸ್ಮಾನ್(﵁) ವರದಿ: ಪ್ರವಾದಿ(ﷺ) ಯವರು ಹೇಳಿದರು: "ಯಾರು ಈ ರೀತಿಯಲ್ಲಿ ವುದೂ ನಿರ್ವ-ಹಿಸುತ್ತಾರೋ ಅವರ ಗತ ಪಾಪಗಳು ಕ್ಷಮಿಸಲ್ಪಡುತ್ತವೆ.

10 ಅಲ್‌ಬುಖಾರಿ ಮುಸ್ಲಿಂ

ಅವರ ನಮಾಝ್ ಮತ್ತು ಅವರು ಮಸೀದಿಗೆ ಹಾಕಿದ ಹೆಜ್ಜೆಗಳಿಗೆ ಪ್ರತ್ಯೇಕ ಪ್ರತಿಫಲಗಳಿವೆ."[11]

عَنْ أَبِي أَيُّوبٍ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «مَنْ تَوَضَّأَ كَمَا أُمِرَ، وَصَلَّى كَمَا أُمِرَ، غُفِرَ لَهُ مَا تَقَدَّمَ مِنْ عَمَلٍ.»

ಅಬೂ ಅಯ್ಯೂಬ್(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ಆದೇಶಿಸಲಾದ ರೀತಿಯಲ್ಲಿ ವುದೂ ನಿರ್ವಹಿಸುವವರು ಮತ್ತು ಆದೇಶಿಸಲಾದ ರೀತಿಯಲ್ಲಿ ನಮಾಝ್ ನಿರ್ವಹಿಸುವವರು ಯಾರೋ ಅವರ ಗತ ಪಾಪಗಳನ್ನು ಕ್ಷಮಿಸಲಾಗುವುದು."[12]

- ವುದೂವಿನ ಮೂಲಕ ಮುಂದಿನ ಹತ್ತು ದಿನಗಳ ಪಾ-

11 ಮುಸ್ಲಿಂ

12 ಅಹ್ಮದ್, ಅನ್ನಸಾಈ, ಇಬ್ನ್ ಮಾಜ

ಪಗಳನ್ನು ಮನ್ನಿಸಲಾಗುತ್ತದೆ.

عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «مَنْ تَوَضَّأَ فَأَحْسَنَ الْوُضُوءَ، ثُمَّ أَتَى الْجُمُعَةَ، فَاسْتَمَعَ وَأَنْصَتَ، غُفِرَ لَهُ مَا بَيْنَهُ وَبَيْنَ الْجُمُعَةِ، وَزِيَادَةُ ثَلاثَةِ أَيَّامٍ.»

ಅಬೂ ಹುರೈರ(﵁) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ಯಾರಾದರೂ ಅತ್ಯುತ್ತಮ ರೀತಿಯಲ್ಲಿ ವುದೂ ನಿರ್ವಹಿಸಿ, ಜುಮಾ ನಮಾಝ್‌ಗೆ ಬಂದು, ಮೌನವಾಗಿ ಕುಳಿತು ಕುತುಬ ಆಲಿಸಿದರೆ, ಆ ಜುಮುಅ (ಶುಕ್ರವಾರ) ಮತ್ತು ಮುಂದಿನ ಜುಮುಅದ (ಶುಕ್ರವಾರದ) ನಡುವೆ ಸಂಭವಿಸುವ ಪಾಪಗಳನ್ನು ಮನ್ನಿಸಲಾಗುವುದು. ಮಾತ್ರವಲ್ಲ ಹೆಚ್ಚುವರಿ ಮೂರು

ದಿನಗಳ ಪಾಪಗಳನ್ನೂ ಮನ್ನಿಸಲಾಗುವುದು."[13]

- ವುದೂನಿಂದಾಗಿ ಸ್ವರ್ಗ ಕಡ್ಡಾಯವಾಗುತ್ತದೆ.

عَنْ عَقْبَةَ بْنِ عَامِرٍ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «مَا مِنْ مُسْلِمٍ يَتَوَضَّأُ، فَيُحْسِنُ وُضُوءَهُ، ثُمَّ يَقُومُ فَيُصَلِّي رَكْعَتَيْنِ، مُقْبِلٌ عَلَيْهِمَا بِقَلْبِهِ وَوَجْهِهِ، إِلَّا وَجَبَتْ لَهُ الْجَنَّةُ.»

ಉಕ್ಬ ಇಬ್ನ್ ಆಮಿರ್(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ಒಬ್ಬ ಮುಸಲ್ಮಾನನು ಅತ್ಯುತ್ತಮ ರೀತಿಯಲ್ಲಿ ವುದೂ ನಿರ್ವಹಿಸಿ, ನಂತರ ಹೃದಯ ಮತ್ತು ಮುಖವನ್ನು ಕೇಂದ್ರೀಕರಿಸಿ ಎರಡು ರಕಅತ್ ನಮಾಝ್ ನಿರ್ವಹಿಸಿದರೆ ಅವನಿಗೆ ಸ್ವರ್ಗವು ಕಡ್ಡಾ-

13 ಮುಸ್ಲಿಂ

ಯವಾಗದೆ ಇರುವುದಿಲ್ಲ."[14]

- ವುದೂನಿಂದಾಗಿ ಸ್ವರ್ಗದ ಎಂಟು ಬಾಗಿಲುಗಳು ತೆ-ರೆಯುತ್ತವೆ.

عَنْ عُمَرَ بْنِ الْخَطَّابِ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «مَا مِنْكُمْ مِنْ أَحَدٍ يَتَوَضَّأُ فَيُبْلِغُ — أَوْ فَيُسْبِغُ — الْوَضُوءَ، ثُمَّ يَقُولُ: أَشْهَدُ أَنْ لَا إِلَهَ إِلَّا اللَّهُ، وَأَنَّ مُحَمَّدًا عَبْدُ اللَّهِ وَرَسُولُهُ إِلَّا فُتِحَتْ لَهُ أَبْوَابُ الْجَنَّةِ الثَّمَانِيَةُ، يَدْخُلُ مِنْ أَيِّهَا شَاءَ.»

ಉಮರ್ ಇಬ್ನುಲ್ ಖತ್ತಾಬ್(ﷺ) ರಿಂದ ವರದಿ: ಪ್ರ-ವಾದಿ(ﷺ) ಯವರು ಹೇಳಿದರು: "ನಿಮ್ಮಲ್ಲೊಬ್ಬರು

14 ಮುಸ್ಲಿಂ

ಅತ್ಯುತ್ತಮ ರೀತಿಯಲ್ಲಿ ವುದೂ ನಿರ್ವಹಿಸಿ ನಂತರ 'ಅಶ್‌ಹದು ಅನ್ ಲಾ ಇಲಾಹ ಇಲ್ಲಲ್ಲಾಹ್, ವಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ' ಎಂದು ಹೇಳಿದರೆ ಅವರಿಗೆ ಸ್ವರ್ಗದ ಎಂಟು ಬಾಗಿಲುಗಳು ತೆರೆಯದೆ ಇರುವುದಿಲ್ಲ. ಅವುಗಳಲ್ಲಿ ಯಾವ ಬಾಗಿಲಿನ ಮೂಲಕವೂ ಅವರಿಗೆ ಸ್ವರ್ಗವನ್ನು ಪ್ರವೇಶಿಸಬಹು-ದು."[15]

## ವುದೂ ನಿರ್ವಹಿಸುವ ವಿಧಾನ

- ನಿಯ್ಯತ್: "ನಾನು ವುದೂ ನಿರ್ವಹಿಸುತ್ತೇನೆ" ಎಂದು ಹೃದಯದಲ್ಲಿ ನಿಯ್ಯತ್ ಮಾಡುವುದು. ನಿಯತ್ತ-ನ್ನು ಬಾಯಿ ಮೂಲಕ ಉಚ್ಚರಿಸಬಾರದು. ನಿಯತ್ ಮಾಡುವುದು ಕಡ್ಡಾಯವಾಗಿದೆ.

عَنْ عُمَرَ بْنِ الْخَطَّابِ رَضِيَ اللَّهُ عَنْهُ أَنَّ

15 ಮುಸ್ಲಿಂ

**النَّبِيَّ صَلَّى اللَّهُ عَلَيْهِ وَسَلَّمَ قَالَ: «إِنَّمَا الْأَعْمَالُ بِالنِّيَّاتِ، وَإِنَّمَا لِكُلِّ امْرِئٍ مَا نَوَى.»**

ಉಮರ್ ಇಬ್ನುಲ್ ಖತ್ತಾಬ್(﵁) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: “ಕರ್ಮಗಳು ನಿಯತ್ತನ್ನು ಅವಲಂಬಿಸಿಕೊಂಡಿವೆ. ಪ್ರತಿಯೊಬ್ಬ ವ್ಯಕ್ತಿಗೂ ಅವನು ನಿಯ್ಯತ್ ಮಾಡಿದ್ದು ಮಾತ್ರ ಸಿಗುತ್ತದೆ.”[16]

## ಮಿಸ್ವಾಕ್ ಮಾಡುವುದು

- ನಂತರ ಮಿಸ್ವಾಕ್ ಬಳಸಿ ಹಲ್ಲುಜ್ಜಬೇಕು. ಇದು ಸುನ್ನತ್ತಾಗಿದೆ.

**عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «لَوْلَا أَنْ أَشُقَّ**

16 ಅಲ್‌ಬುಖಾರಿ, ಮುಸ್ಲಿಂ

عَلَى أُمَّتِي لَأَمَرْتُهُمْ بِالسِّوَاكِ مَعَ الْوُضُوءِ.»

ಅಬೂ ಹುರೈರ(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ನನ್ನ ಸಮುದಾಯಕ್ಕೆ ಕಷ್ಟವಾ-ಗಲಾರದು ಎಂದಾಗಿದ್ದರೆ ವುದೂ ನಿರ್ವಹಿಸುವುದಕ್ಕೆ ಮುಂಚೆ ಮಿಸ್ವಾಕ್ ಮಾಡಬೇಕೆಂದು ನಾನು ಅವರಿಗೆ ಆದೇಶಿಸುತ್ತಿದ್ದೆ."[17]

عَنْ عَائِشَةَ رَضِيَ اللَّهُ عَنْهَا قَالَتْ: كُنَّا نُعِدُّ لَهُ سِوَاكَهُ وَطَهُورَهُ. فَيَبْعَثُهُ اللَّهُ مَا شَاءَ أَنْ يَبْعَثَهُ مِنَ اللَّيْلِ. فَيَتَسَوَّكُ، وَيَتَوَضَّأُ.

ಆಯಿಶ(ﷺ) ರಿಂದ ವರದಿ: "ನಾವು ಪ್ರವಾದಿ(ﷺ) ಯವರಿಗೆ ಮಿಸ್ವಾಕ್ ಮತ್ತು ವುದೂ ನಿರ್ವಹಿಸುವುದ-ಕ್ಕಿರುವ ನೀರನ್ನು ಸಿದ್ಧಪಡಿಸುತ್ತಿದ್ದೆವು. ರಾತ್ರಿ ಅಲ್ಲಾಹು

17 ಅಹ್ಮದ್

ಇಚ್ಛಿಸಿದಾಗ ಅವರು ಎದ್ದು ಮಿಸ್ವಾಕ್ ಮಾಡುತ್ತಿದ್ದರು ಮತ್ತು ವುದೂ ನಿರ್ವಹಿಸುತ್ತಿದ್ದರು."[18]

## ಬಿಸ್ಮಿಲ್ಲಾಹ್ ಹೇಳುವುದು

- ನಂತರ ಬಿಸ್ಮಿಲ್ಲಾಹ್ ಎಂದು ಹೇಳಬೇಕು.

عَنْ أَنَسِ بْنِ مَالِكٍ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ وَضَعَ يَدَهُ فِي الْمَاءِ وَقَالَ لِأَصْحَابِهِ: «تَوَضَّئُوا بِسْمِ اللَّهِ.» قَالَ: فَرَأَيْتُ الْمَاءَ يَخْرُجُ مِنْ بَيْنِ أَصَابِعِهِ حَتَّى تَوَضَّئُوا مِنْ عِنْدِ آخِرِهِمْ.

ಅನಸ್(رضي الله عنه) ರಿಂದ ವರದಿ: ಪ್ರವಾದಿ(ﷺ) ಯವರು ಕೈಯನ್ನು ನೀರಿನಲ್ಲಿಟ್ಟು ಸಹಾಬಿಗಳೊಡನೆ ಹೇಳಿದರು: "ಅಲ್ಲಾಹನ ಹೆಸರು ಹೇಳಿ ವುದೂ ನಿರ್ವಹಿಸಿರಿ."

---

18 ಮುಸ್ಲಿಂ

ಅನಸ್(ﷺ) ಹೇಳುತ್ತಾರೆ: "ಆಗ ಅವರ ಬೆರಳುಗಳ ಸಂಧಿಯಿಂದ ನೀರು ಹರಿದು ಬರುವುದನ್ನು ನಾನು ಕಾಣುತ್ತಿದ್ದೆ. ಸಹಾಬಿಗಳಲ್ಲಿ ಕೊನೆಯ ವ್ಯಕ್ತಿ ವುದೂ ನಿ-ರ್ವಹಿಸುವ ತನಕ ನೀರು ಬರುತ್ತಲೇ ಇತ್ತು."[19]

## ಅಂಗೈಗಳನ್ನು ತೊಳೆಯುವುದು

- ನಂತರ ಅಂಗೈಗಳನ್ನು ಮೂರು ಸಲ ತೊಳೆಯಬೇಕು. ಇದು ಸುನ್ನತ್ತಾಗಿದೆ.

**عَنْ حُمْرَانَ أَنَّ عُثْمَانَ رَضِيَ اللَّهُ عَنْهُ دَعَا بِإِنَاءٍ، فَأَفْرَغَ عَلَى كَفَّيْهِ ثَلَاثَ مِرَارٍ، فَغَسَلَهُمَا... ثُمَّ قَالَ: رَأَيْتُ رَسُولَ اللَّهِ صَلَّى اللَّهُ عَلَيْهِ وَسَلَّمَ تَوَضَّأَ نَحْوَ وُضُوئِي هَذَا.**

---

19 ಅನ್ನಸಾಈ

ಹುಮ್ರಾನ್(ﷺ) ರಿಂದ ವರದಿ: ಉಸ್ಮಾನ್(ﷺ) ರವರು ನೀರಿನ ಪಾತ್ರೆಯನ್ನು ತರಿಸಿದರು. ನೀರನ್ನು ತಮ್ಮ ಅಂಗೈಗಳ ಮೇಲೆ ಮೂರು ಸಲ ಸುರಿದು ಅವುಗಳನ್ನು ತೊಳೆದರು.... ನಂತರ ಹೇಳಿದರು: "ನಾನು ಈಗ ವುದೂ ನಿರ್ವಹಿಸಿದ ರೀತಿಯಲ್ಲಿಯೇ ಪ್ರವಾದಿ(ﷺ) ಯವರು ವುದೂ ನಿರ್ವಹಿಸುವುದನ್ನು ನಾನು ಕಂಡಿದ್ದೇನೆ."[20]

- ನಿದ್ದೆಯಿಂದ ಎದ್ದಾಗ ಅಂಗೈಗಳನ್ನು ಮೂರು ಸಲ ತೊಳೆಯುವುದು ಕಡ್ಡಾಯವಾಗಿದೆ.

**عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «إِذَا اسْتَيْقَظَ أَحَدُكُمْ مِنْ نَوْمِهِ، فَلَا يَغْمِسْ يَدَهُ فِي الْإِنَاءِ حَتَّى يَغْسِلَهَا ثَلَاثًا. فَإِنَّهُ لَا يَدْرِي أَيْنَ بَاتَتْ**

20 ಅಲ್‌ಬುಖಾರಿ, ಮುಸ್ಲಿಂ

يَدُهُ.»

ಅಬೂ ಹುರೈರ(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ನಿಮ್ಮಲ್ಲೊಬ್ಬರು ನಿದ್ದೆಯಿಂದ ಎದ್ದರೆ ತನ್ನ ಕೈಯನ್ನು ಮೂರು ಸಲ ತೊಳೆಯುವ ತನಕ ಪಾತ್ರೆಯಲ್ಲಿ ಮುಳುಗಿಸಬಾರದು. ಏಕೆಂದರೆ ರಾತ್ರಿ ತನ್ನ ಕೈ ಎಲ್ಲಿತ್ತೆಂದು ಅವನಿಗೆ ತಿಳಿದಿಲ್ಲ."[21]

## ಬಾಯಿ ಮುಕ್ಕಳಿಸುವುದು ಮತ್ತು ಮೂಗಿಗೆ ನೀರೆಳೆದು ಹೊರ ಬಿಡುವುದು

- ನಂತರ ಬಾಯಿ ಮುಕ್ಕಳಿಸಬೇಕು. ನೀರನ್ನು ಬಾಯಿಗೆ ಹಾಕಿ ಚೆನ್ನಾಗಿ ಅಲ್ಲಾಡಿಸಬೇಕು. ನಂತರ ಮೂಗಿನೊ-ಳಗೆ ನೀರನ್ನು ಎಳೆದು ರಭಸವಾಗಿ ಹೊರ ಬಿಡಬೇಕು.

عَنْ حُمْرَانَ أَنَّ عُثْمَانَ رَضِيَ اللَّهُ عَنْهُ

21 ಅಲ್‌ಬುಖಾರಿ, ಮುಸ್ಲಿಂ

أَدْخَلَ يَمِينَهُ فِي الْوَضُوءِ، ثُمَّ تَمَضْمَضَ، وَاسْتَنْشَقَ، وَاسْتَنْثَرَ... ثُمَّ قَالَ: رَأَيْتُ رَسُولَ اللَّهِ صَلَّى اللَّهُ عَلَيْهِ وَسَلَّمَ تَوَضَّأَ نَحْوَ وُضُوئِي هَذَا.

ಹುಮ್ರಾನ್(ﷺ) ರಿಂದ ವರದಿ: ಉಸ್ಮಾನ್(ﷺ) ರವರು ತಮ್ಮ ಬಲಗೈಯನ್ನು ನೀರಿನ ಪಾತ್ರೆಗೆ ತೂರಿಸಿದರು. ನಂತರ ಬಾಯಿ ಮುಕ್ಕಳಿಸಿದರು ಮತ್ತು ಮೂಗಿನೊಳಗೆ ನೀರು ಎಳೆದು ಹೊರ ಬಿಟ್ಟರು... ನಂತರ ಹೇಳಿದರು: "ನಾನು ಈಗ ವುದೂ ನಿರ್ವಹಿಸಿದ ರೀತಿಯಲ್ಲಿಯೇ ಪ್ರವಾದಿ(ﷺ) ಯವರು ವುದೂ ನಿರ್ವಹಿಸುವುದನ್ನು ನಾನು ಕಂಡಿದ್ದೇನೆ."[22]

- ಬಾಯಿ ಮುಕ್ಕಳಿಸುವುದು ಮತ್ತು ಮೂಗಿಗೆ ನೀರೆಳೆಯುವುದು ಒಂದೇ ಕೈಯಲ್ಲಿ ಒಟ್ಟೊಟ್ಟಿಗೆ ಆಗಿರಬೇಕು.

22 ಅಲ್‌ಬುಖಾರಿ, ಮುಸ್ಲಿಂ

ಇದನ್ನು ಮೂರು ಸಲ ಆವರ್ತಿಸಬೇಕು.

**عَنْ عَبْدِ اللَّهِ بْنِ زَيْدٍ رَضِيَ اللَّهُ عَنْهُ أَنَّهُ مَضْمَضَ وَاسْتَنْشَقَ مِنْ كَفٍّ وَاحِدَةٍ. فَفَعَلَ ذَلِكَ ثَلَاثًا. ثُمَّ قَالَ: هَكَذَا كَانَ وُضُوءُ رَسُولِ اللَّهِ صَلَّى اللَّهُ عَلَيْهِ وَسَلَّمَ.**

ಅಬ್ದುಲ್ಲಾಹ್ ಇಬ್ನ್ ಝೈದ್(ﷺ) ರಿಂದ ವರದಿ: ಅವರು ಒಂದೇ ಕೈಯಿಂದ ಬಾಯಿಗೆ ಮತ್ತು ಮೂಗಿಗೆ ನೀರು ಹಾಕಿ ಬಾಯಿ ಮುಕ್ಕಳಿಸಿದರು ಮತ್ತು ಮೂಗಿಗೆ ನೀರೆಳೆದರು. ಅವರು ಇದನ್ನು ಮೂರು ಸಲ ಮಾಡಿದರು. ನಂತರ ಹೇಳಿದರು: "ಪ್ರವಾದಿ(ﷺ) ಯವರ ವುದೂ ಇದೇ ರೀತಿಯಲ್ಲಿತ್ತು."[23]

- ಬಾಯಿ ಮುಕ್ಕಳಿಸುವುದು ಮತ್ತು ಮೂಗಿಗೆ ನೀ-

23 ಮುಸ್ಲಿಂ

ರೆಳೆಯುವುದು ಬಲಗೈಯಿಂದಾಗಿರಬೇಕು ಮತ್ತು ಮೂಗಿನಿಂದ ನೀರು ಹೊರ ಹಾಕುವುದು ಎಡಗೈ-ಯಿಂದಾಗಿರಬೇಕು.

**عَنْ عَبْدِ خَيْرٍ أَنَّ عَلِيَّ بْنَ أَبِي طَالِبٍ رَضِيَ اللَّهُ عَنْهُ أَدْخَلَ يَدَهُ الْيُمْنَى، فَمَلأَ فَمَهُ، فَمَضْمَضَ، وَاسْتَنْشَقَ، وَنَثَرَ بِيَدِهِ الْيُسْرَى. فَعَلَ هَذَا ثَلَاثَ مَرَّاتٍ. ثُمَّ قَالَ: مَنْ سَرَّهُ أَنْ يَنْظُرَ إِلَى طُهُورِ رَسُولِ اللَّهِ صَلَّى اللَّهُ عَلَيْهِ وَسَلَّمَ فَهَذَا طُهُورُهُ.**

ಅಬ್ದು ಖೈರ್(ﷺ) ರಿಂದ ವರದಿ: ಅಲಿ ಇಬ್ನ್ ಅಬೂ ತಾಲಿಬ್(ﷺ) ಬಲಗೈಯಿಂದ ನೀರು ತೆಗೆದು ಬಾಯಿಗೆ ತುಂಬಿಸಿ ಮುಕ್ಕಳಿಸಿದರು ಮತ್ತು ಮೂಗಿಗೆ ನೀರೆಳೆದರು. ನಂತರ ಎಡಗೈಯಿಂದ ನೀರನ್ನು ಹೊರಗೆ ಹಾಕಿದರು.

ಅವರು ಇದನ್ನು ಮೂರು ಸಲ ಮಾಡಿದರು. ನಂತರ ಹೇಳಿದರು: “ಪ್ರವಾದಿ(ﷺ) ಯವರು ವುದೂ ನಿರ್ವಹಿಸಿದ ವಿಧಾನವನ್ನು ನೋಡಲು ಯಾರಿಗಾದರೂ ಇಷ್ಟವಿದ್ದರೆ ನೋಡಿ, ಇದೇ ಅವರು ವುದೂ ನಿರ್ವಹಿಸಿದ ವಿಧಾನ”.[24]

- ಮೂಗಿಗೆ ನೀರೆಳೆಯುವುದು ಕಡ್ಡಾಯವಾಗಿದೆ. ವಿಶೇಷವಾಗಿ ನಿದ್ದೆಯಿಂದ ಎದ್ದಾಗ.

عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «إِذَا تَوَضَّأَ أَحَدُكُمْ فَلْيَجْعَلْ فِي أَنْفِهِ مَاءً، ثُمَّ لِيَنْتَثِرْ.»

ಅಬೂ ಹುರೈರ(ರ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: “ನಿಮ್ಮಲ್ಲೊಬ್ಬರು ವುದೂ ನಿರ್ವಹಿಸುವಾಗ ತನ್ನ ಮೂಗಿನಲ್ಲಿ ನೀರನ್ನು ಹಾಕಿ ನಂತರ

24 ಅದ್ದಾರಿಮಿ

ಹೊರಗೆ ಬಿಡಲಿ."[25]

ಅಲ್‌ಬುಖಾರಿ ಮತ್ತು ಮುಸ್ಲಿಮ್‌ನಲ್ಲಿರುವ ಇನ್ನೊಂದು ವರದಿಯಲ್ಲಿ ಪ್ರವಾದಿ(ﷺ) ಯವರು ಹೇಳುತ್ತಾರೆ:

«إِذَا اسْتَيْقَظَ أَحَدُكُمْ مِنْ مَنَامِهِ فَلْيَسْتَنْثِرْ ثَلَاثَ مَرَّاتٍ. فَإِنَّ الشَّيْطَانَ يَبِيتُ عَلَى خَيَاشِيمِهِ».

"ನಿಮ್ಮಲ್ಲೊಬ್ಬರು ನಿದ್ದೆಯಿಂದ ಎದ್ದರೆ ಮೂರು ಸಲ ಮೂಗಿಗೆ ನೀರೆಳೆದು ಹೊರಬಿಡಲಿ. ಏಕೆಂದರೆ ರಾತ್ರಿ ಶೈತಾನನು ಮೂಗಿನೊಳಗೆ ವಾಸ ಮಾಡುತ್ತಾನೆ."

- ಉಪವಾಸ ಇಲ್ಲದಿದ್ದರೆ ಮೂಗಿನೊಳಗೆ ಗರಿಷ್ಠವಾಗಿ ನೀರೆಳೆಯಬೇಕು.

25 ಅಲ್‌ಬುಖಾರಿ, ಮುಸ್ಲಿಂ

عَنْ لَقِيطِ بْنِ صَبِرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «أَسْبِغِ الْوُضُوءَ، وَبَالِغْ فِي الِاسْتِنْشَاقِ، إِلَّا أَنْ تَكُونَ صَائِمًا.»

ಲಕೀತ್ ಇಬ್ನ್ ಸಬಿರ(﵁) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ಅತ್ಯುತ್ತಮವಾಗಿ ವುದೂ ನಿರ್ವ-ಹಿಸಿರಿ. ಮೂಗಿಗೆ ಗರಿಷ್ಠವಾಗಿ ನೀರು ಎಳೆಯಿರಿ. ನೀವು ಉಪವಾಸ ಇಲ್ಲದವರಾಗಿದ್ದರೆ ಮಾತ್ರ."[26]

## ಮುಖ ತೊಳೆಯುವುದು

- ನಂತರ ಮುಖವನ್ನು ತೊಳೆಯಬೇಕು. ಮುಖ ಎಂದರೆ ಹಣೆಯಲ್ಲಿ ಕೂದಲು ಬೆಳೆಯುವ ಜಾಗದಿಂದ ತೊಡಗಿ ಗಲ್ಲ ಮತ್ತು ದಾಡಿಯವರೆಗೆ ಹಾಗೂ ಒಂದು

26 ಅಬೂದಾವೂದ್

ಕಿವಿಯಿಂದ ಇನ್ನೊಂದು ಕಿವಿಯವರೆಗಿನ ಭಾಗ. ಮುಖ ತೊಳೆಯುವುದು ಕಡ್ಡಾಯವಾಗಿದೆ. ಏಕೆಂದರೆ ಅಲ್ಲಾಹು ಹೇಳುತ್ತಾನೆ:

﴿يَٰٓأَيُّهَا ٱلَّذِينَ ءَامَنُوٓاْ إِذَا قُمۡتُمۡ إِلَى ٱلصَّلَوٰةِ فَٱغۡسِلُواْ وُجُوهَكُمۡ﴾

“ಓ ಸತ್ಯವಿಶ್ವಾಸಿಗಳೇ! ನೀವು ನಮಾಝ್ ನಿರ್ವಹಿಸಲು ಬಯಸಿದರೆ ನಿಮ್ಮ ಮುಖಗಳನ್ನು ತೊಳೆಯಿರಿ...”[27]

- ಮುಖವನ್ನು ಮೂರು ಸಲ ತೊಳೆಯಬೇಕು.

عَنْ حُمْرَانَ أَنَّ عُثْمَانَ رَضِيَ اللَّهُ عَنْهُ غَسَلَ وَجْهَهُ ثَلَاثَ مَـرَّاتٍ... ثُمَّ قَالَ: رَأَيْتُ رَسُولَ اللَّهِ صَلَّى اللَّهُ عَلَيْهِ وَسَلَّمَ تَوَضَّأَ

27 ಸೂರ ಅಲ್‌ಮಾಇದ 6

نَحْوَ وُضُوئِي هَذَا.

ಹುಮ್ರಾನ್(ﷺ) ರಿಂದ ವರದಿ: ಉಸ್ಮಾನ್(ﷺ)ರವರು ಮೂರು ಸಲ ಮುಖವನ್ನು ತೊಳೆದರು. ನಂತರ ಹೇಳಿದರು: "ನಾನು ಈಗ ವುದೂ ನಿರ್ವಹಿಸಿದ ರೀತಿಯಲ್ಲಿಯೇ ಪ್ರವಾದಿ(ﷺ) ಯವರು ವುದೂ ನಿರ್ವಹಿಸುವುದನ್ನು ನಾನು ಕಂಡಿದ್ದೇನೆ."[28]

- ದಾಡಿ ದಟ್ಟವಾಗಿದ್ದರೆ ಅದರ ಒಳಭಾಗಗಳಿಗೆ ನೀರು ಹಾಯಿಸುವುದು ಸುನ್ನತ್ತಾಗಿದೆ.

عَنْ عُثْمَانَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ كَانَ يُخَلِّلُ لِحْيَتَهُ.

ಉಸ್ಮಾನ್(ﷺ)ರಿಂದ ವರದಿ: ಪ್ರವಾದಿ(ﷺ) ಯವರು ದಾಡಿ ರೋಮಗಳ ನಡುವೆ ತಮ್ಮ ಬೆರಳುಗಳನ್ನು

28 ಅಲ್‌ಬುಖಾರಿ, ಮುಸ್ಲಿಂ

ತೂರಿಸಿ ತಿಕ್ಕುತ್ತಿದ್ದರು."[29]

- ದಾಡಿ ತೊಳೆಯುವ ವಿಧಾನ: ನೀರನ್ನು ದಾಡಿಯ ಕೆಳಭಾಗದಿಂದ ತಂದು ದಾಡಿಯ ರೋಮಗಳ ನಡುವೆ ಬೆರಳುಗಳನ್ನು ತೂರಿಸಿ ತಿಕ್ಕಬೇಕು.

عَنْ أَنَسٍ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ كَانَ إِذَا تَوَضَّأَ، أَخَذَ كَفًّا مِنْ مَاءٍ، فَأَدْخَلَهُ تَحْتَ حَنَكِهِ، فَخَلَّلَ بِهِ لِحْيَتَهُ، وَقَالَ: «هَكَذَا أَمَرَنِي رَبِّي عَزَّ وَجَلَّ.»

ಅನಸ್(ﷺ) ರಿಂದ ವರದಿ: ಪ್ರವಾದಿ(ﷺ) ಯವರು ವುದೂ ನಿರ್ವಹಿಸುವಾಗ ಅಂಗೈ ತುಂಬಾ ನೀರನ್ನು ತೆಗೆದು ಅದನ್ನು ತಮ್ಮ ದಾಡಿಯ ಕೆಳಭಾಗದಿಂದ ದಾಡಿಯೊಳಗೆ ತೂರಿಸುತ್ತಿದ್ದರು. ನಂತರ ದಾಡಿ

---

29 ಅಹ್ಮದ್, ಅತ್ತಿರ್ಮಿದಿ

ರೋಮಗಳ ನಡುವೆ ಬೆರಳುಗಳನ್ನು ತೂರಿಸಿ ತಿಕ್ಕುತ್ತಿದ್ದರು. ನಂತರ ಹೇಳುತ್ತಿದ್ದರು: "ನನ್ನ ರಬ್ಬ್ ಈ ರೀತಿ ಮಾಡಲು ನನಗೆ ಆಜ್ಞಾಪಿಸಿದ್ದಾನೆ."[30]

## ಕೈಗಳನ್ನು ಮೊಣಕೈಗಳ ತನಕ ತೊಳೆಯುವುದು

- ನಂತರ ಕೈಗಳನ್ನು ಮೊಣಕೈಗಳ ಸಹಿತ ಪೂರ್ಣವಾಗಿ ತೊಳೆಯಬೇಕು. ಇದು ಕಡ್ಡಾಯವಾಗಿದೆ. ಏಕೆಂದರೆ ಅಲ್ಲಾಹು ಹೇಳುತ್ತಾನೆ:

﴿يَـٰٓأَيُّهَا ٱلَّذِينَ ءَامَنُوٓا۟ إِذَا قُمْتُمْ
إِلَى ٱلصَّلَوٰةِ فَٱغْسِلُوا۟ وُجُوهَكُمْ
وَأَيْدِيَكُمْ إِلَى ٱلْمَرَافِقِ﴾

"ಓ ಸತ್ಯವಿಶ್ವಾಸಿಗಳೇ! ನೀವು ನಮಾಝ್ ನಿರ್ವಹಿಸಲು ಬಯಸಿದರೆ ನಿಮ್ಮ ಮುಖಗಳನ್ನು ತೊಳೆಯಿರಿ ಮತ್ತು

30 ಅಬೂದಾವೂದ್

ಕೈಗಳನ್ನು ಮೊಣಕೈಗಳವರೆಗೆ ತೊಳೆಯಿರಿ..."[31]

عَنْ نُعَيْمِ بْنِ عَبْدِ اللَّهِ الْمُجْمِرِ قَالَ: رَأَيْتُ أَبَا هُرَيْرَةَ يَتَوَضَّأُ، فَغَسَلَ وَجْهَهُ فَأَسْبَغَ الْوُضُوءَ، ثُمَّ غَسَلَ يَدَهُ الْيُمْنَى حَتَّى أَشْرَعَ فِي الْعَضُدِ، ثُمَّ يَدَهُ الْيُسْرَى حَتَّى أَشْرَعَ فِي الْعَضُدِ، ثُمَّ قَالَ: هَكَذَا رَأَيْتُ رَسُولَ اللَّهِ صَلَّى اللَّهُ عَلَيْهِ وَسَلَّمَ يَتَوَضَّأُ.

ನುಐಮ್ ಇಬ್ನ್ ಅಬ್ದುಲ್ಲಾಹ್ ಅಲ್ ಮುಜ್ಮಿರ್(ﷺ) ರಿಂದ ವರದಿ: ಅಬೂ ಹುರೈರ(ﷺ) ವುದೂ ಮಾಡು-ವುದನ್ನು ನಾನು ಕಂಡಿದ್ದೇನೆ.... ಅವರು ಮುಖವನ್ನು ಅತ್ಯುತ್ತಮ ರೀತಿಯಲ್ಲಿ ತೊಳೆದರು. ನಂತರ ಬಲಗೈ-ಯನ್ನು ತೋಳಿನ ತನಕ ತೊಳೆದರು. ನಂತರ ಎಡ-

31 ಸೂರ ಅಲ್‌ಮಾಇದ 6

ಗೈಯನ್ನು ಸಹ ತೋಳಿನ ತನಕ ತೊಳೆದರು. ನಂತರ ಹೇಳಿದರು: "ಪ್ರವಾದಿ(ﷺ) ಯವರು ಈ ರೀತಿ ವುದೂ ಮಾಡುವುದನ್ನು ನಾನು ಕಂಡಿದ್ದೇನೆ."[32]

- ಕೈಗಳನ್ನು ಮೂರು ಸಲ ತೊಳೆಯಬೇಕು. ಬಲಗೈಯನ್ನು ಮೊದಲು ತೊಳೆಯಬೇಕು.

عَنْ حُمْرَانَ أَنَّ عُثْمَانَ رَضِيَ اللَّهُ عَنْهُ غَسَلَ يَدَهُ الْيُمْنَى إِلَى الْمِرْفَقِ ثَلَاثَ مَرَّاتٍ، ثُمَّ غَسَلَ يَدَهُ الْيُسْرَى مِثْلَ ذَلِكَ... ثُمَّ قَالَ: رَأَيْتُ رَسُولَ اللَّهِ صَلَّى اللَّهُ عَلَيْهِ وَسَلَّمَ تَوَضَّأَ نَحْوَ وُضُوئِي هَذَا.

ಹುಮ್ರಾನ್(﵁) ರಿಂದ ವರದಿ: ಉಸ್ಮಾನ್(﵁) ರವರು ಬಲಗೈಯನ್ನು ಮೊಣಕೈಯ ತನಕ ಮೂರು

32 ಮುಸ್ಲಿಂ

ಸಲ ತೊಳೆದರು. ನಂತರ ಅದೇ ರೀತಿ ಎಡಗೈಯನ್ನು ತೊಳೆದರು. ನಂತರ ಹೇಳಿದರು: "ನಾನು ಈಗ ವುದೂ ನಿರ್ವಹಿಸಿದ ರೀತಿಯಲ್ಲಿಯೇ ಪ್ರವಾದಿ(ﷺ) ಯವರು ವುದೂ ನಿರ್ವಹಿಸುವುದನ್ನು ನಾನು ಕಂಡಿದ್ದೇನೆ."[33]

**عَنْ عَائِشَةَ رَضِيَ اللَّهُ عَنْهَا قَالَتْ: كَانَ النَّبِيُّ صَلَّى اللَّهُ عَلَيْهِ وَسَلَّمَ يُحِبُّ التَّيَمُّنَ فِي طُهُورِهِ، وَتَرَجُّلِهِ، وَتَنَعُّلِهِ.**

ಆಯಿಶ(ؓ) ರಿಂದ ವರದಿ: ಪ್ರವಾದಿ(ﷺ) ಯವರು ಶುದ್ಧೀಕರಣ, ತಲೆ ಬಾಚುವುದು, ಪಾದರಕ್ಷೆ ಧರಿಸುವು-ದು ಮುಂತಾದವುಗಳನ್ನು ಮಾಡುವಾಗ ಬಲಭಾಗಕ್ಕೆ ಪ್ರಾಶಸ್ತ್ಯ ನೀಡುತ್ತಿದ್ದರು."[34]

- ಕೈಬೆರಳುಗಳ ಮಧ್ಯಭಾಗವನ್ನು ತೊಳೆಯಬೇಕು.

---

33 ಅಲ್‌ಬುಖಾರಿ, ಮುಸ್ಲಿಂ

34 ಅಲ್‌ಬುಖಾರಿ, ಮುಸ್ಲಿಂ

عَنْ لَقِيطِ بْنِ صَبِرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «أَسْبِغِ الْوُضُوءَ، وَخَلِّلْ بَيْنَ الْأَصَابِعِ.»

ಲಕೀತ್ ಇಬ್ನ್ ಸಬಿರ(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ಅತ್ಯುತ್ತಮವಾಗಿ ವುದೂ ನಿರ್ವಹಿಸಿರಿ. ಬೆರಳುಗಳ ಮಧ್ಯಭಾಗವನ್ನು ತಿಕ್ಕಿರಿ."[35]

عَنِ ابْنِ عَبَّاسٍ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «إِذَا تَوَضَّأْتَ فَخَلِّلْ بَيْنَ أَصَابِعِ يَدَيْكَ وَرِجْلَيْكَ.»

ಇಬ್ನ್ ಅಬ್ಬಾಸ್(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ನೀನು ವುದೂ ನಿರ್ವಹಿಸುವಾಗ ಕೈಬೆರಳುಗಳ ಮತ್ತು ಕಾಲು ಬೆರಳುಗಳ ಮಧ್ಯ-

35 ಅಬೂದಾವೂದ್, ಅತ್ತಿರ್ಮಿದಿ, ಅನ್ನಸಾಈ, ಇಬ್ನ್ ಮಾಜ

ಭಾಗವನ್ನು ತಿಕ್ಕಬೇಕು."[36]

## ತಲೆ ಸವರುವುದು

- ನಂತರ ನೀರಿನಿಂದ ತಲೆಯನ್ನು ಸವರಬೇಕು. ಇದು ಕಡ್ಡಾಯವಾಗಿದೆ. ಏಕೆಂದರೆ ಅಲ್ಲಾಹು ಹೇಳುತ್ತಾನೆ:

﴿يَٰٓأَيُّهَا ٱلَّذِينَ ءَامَنُوٓاْ إِذَا قُمۡتُمۡ إِلَى ٱلصَّلَوٰةِ فَٱغۡسِلُواْ وُجُوهَكُمۡ وَأَيۡدِيَكُمۡ إِلَى ٱلۡمَرَافِقِ وَٱمۡسَحُواْ بِرُءُوسِكُمۡ﴾

"ಓ ಸತ್ಯವಿಶ್ವಾಸಿಗಳೇ! ನೀವು ನಮಾಝ್ ನಿರ್ವಹಿಸಲು ಬಯಸಿದರೆ ನಿಮ್ಮ ಮುಖಗಳನ್ನು ತೊಳೆಯಿರಿ, ಕೈಗಳನ್ನು ಮೊಣಕೈಗಳವರೆಗೆ ತೊಳೆಯಿರಿ ಮತ್ತು ತಲೆಯನ್ನು ಸವರಿರಿ..."[37]

---

36 ಅತ್ತಿರ್ಮಿದಿ

37 ಸೂರ ಅಲ್‌ಮಾಇದ 6

- ತಲೆ ಸವರುವ ವಿಧಾನ: ತಲೆಯನ್ನು ಸಂಪೂರ್ಣವಾಗಿ ಒಂದು ಸಲ ಸವರಬೇಕು. ತಲೆಯ ಮುಂಭಾಗದಿಂದ ಆರಂಭಿಸಿ ಕತ್ತಿನ ಹಿಂಭಾಗದ ತನಕ ನಂತರ ಪುನಃ ತಲೆಯ ಮುಂಭಾಗದ ತನಕ ಎರಡು ಕೈಗಳಿಂದ ತಲೆ-ಯನ್ನು ಸವರಬೇಕು.

عَنْ عَبْدِ اللَّهِ بْنِ زَيْدٍ رَضِيَ اللَّهُ عَنْه أَنَّهُ مَسَحَ رَأْسَهَ بِيَدَيْهِ. فَأَقْبَلَ بِهِمَا وَأَدْبَرَ، بَدَأَ بِمُقَدَّمِ رَأْسِهِ حَتَّى ذَهَبَ بِهِمَا إِلَى قَفَاهُ، ثُمَّ رَدَّهُمَا إِلَى الْمَكَانِ الَّذِي بَدَأَ مِنْهُ. وَفِي رِوَايَةٍ: «مَرَّةً وَاحِدَةً.»

ಅಬ್ದುಲ್ಲಾಹ್ ಇಬ್ನ್ ಝೈದ್(ﷺ) ರಿಂದ ವರದಿ: ಅವರು ತಮ್ಮ ತಲೆಯನ್ನು ಎರಡು ಕೈಗಳಿಂದ ಸವರಿದರು. ಎರಡು ಕೈಗಳನ್ನು ತಲೆಯ ಮುಂಭಾಗದಿಂದ ಹಿಂಭಾ-ಗಕ್ಕೆ ಮತ್ತು ಹಿಂಭಾಗದಿಂದ ಮುಂಭಾಗಕ್ಕೆ ತಂದರು.

ಅಂದರೆ ತಲೆಯ ಎದುರುಭಾಗದಿಂದ ಆರಂಭಿಸಿ ಕತ್ತಿನ ಹಿಂಭಾಗಕ್ಕೆ ತಲುಪುವ ತನಕ ಸವರಿದರು. ನಂತರ ಕೈ-ಗಳನ್ನು ಅದೇ ರೀತಿ ತಲೆಯ ಮುಂಭಾಗಕ್ಕೆ ಸವರಲು ಆರಂಭಿಸಿದ ಸ್ಥಳಕ್ಕೆ ಮರಳಿಸಿದರು."[38] ಇನ್ನೊಂದು ವರದಿಯಲ್ಲಿ "ಅವರು ತಲೆಯನ್ನು ಒಂದು ಸಲ ಸವ-ರಿದರು" ಎಂದು ಹೇಳಲಾಗಿದೆ.

- ತಲೆ ಸವರಲು ಬೇರೆಯೇ ನೀರನ್ನು ತೆಗೆದುಕೊಳ್ಳಬ-ಹುದು.

**عَنْ عَبْدِ اللَّهِ بْنِ زَيْدٍ رَضِيَ اللَّهُ عَنْهُ أَنَّهُ رَأَى رَسُولَ اللَّهِ صَلَّى اللَّهُ عَلَيْهِ وَسَلَّمَ مَسَحَ بِرَأْسِهِ بِمَاءٍ غَيْرِ فَضْلِ يَدِهِ.**

ಅಬ್ದುಲ್ಲಾ ಇಬ್ನ್ ಝೈದ್(ﷺ) ರಿಂದ ವರದಿ: ಪ್ರವಾ-ದಿ(ﷺ) ಯವರು ತಮ್ಮ ಕೈಯಲ್ಲಿ ಉಳಿದ ನೀರಿಲ್ಲದ

38 ಅಲ್‌ಬುಖಾರಿ ಮುಸ್ಲಿಂ

ಬೇರೆಯೇ ನೀರನ್ನು ತೆಗೆದು ತಲೆಯನ್ನು ಸವರಿದರು.[39]

**عَنِ الرُّبَيِّعِ بِنْتِ مُعَوِّذٍ رَضِيَ اللَّهُ عَنْهَا أَنَّ النَّبِيَّ صَلَّى اللَّهُ عَلَيْهِ وَسَلَّمَ مَسَحَ بِرَأْسِهِ مِنْ فَضْلِ مَاءٍ كَانَ فِي يَدِهِ.**

ರುಬಯ್ಯಿಅ್ ಬಿನ್ತ್ ಮುಅವ್ವಿದ್‌(رضي الله عنها) ರಿಂದ ವರದಿ: ಪ್ರವಾದಿ(ﷺ) ಯವರು ತಮ್ಮ ಕೈಯಲ್ಲಿ ಉಳಿದ ನೀರಿನಿಂದ ತಲೆಯನ್ನು ಸವರಿದರು.[40]

- ತಲೆಯನ್ನು ಸವರುವುದರ ಜೊತೆಗೆ ಕಿವಿಗಳನ್ನೂ ಸವ-ರಬೇಕು.

**عَنْ أَبِي أُمَامَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «الْأُذُنَانِ مِنَ الرَّأْسِ.»**

39 ಮುಸ್ಲಿಂ

40 ಅಬೂದಾವೂದ್

ಅಬೂ ಉಮಾಮ(﵁) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: “ಎರಡು ಕಿವಿಗಳು ತಲೆಗೆ ಸೇರಿದ್ದಾಗಿವೆ.”[41]

- ಕಿವಿಯನ್ನು ಸವರುವ ವಿಧಾನ: ಎರಡು ತೋರು ಬೆರಳುಗಳನ್ನು ಕಿವಿಗಳ ಒಳಗೆ ತೂರಿಸಿ ಎರಡು ಹೆಬ್ಬೆರಳುಗಳಿಂದ ಕಿವಿಯ ಹೊರಭಾಗವನ್ನು ಮತ್ತು ತೋರು ಬೆರಳುಗಳಿಂದ ಒಳಭಾಗವನ್ನು ಸವರಬೇಕು. ಕಿವಿಯ ಒಳಭಾಗ ಮತ್ತು ಹೊರಭಾಗಗಳನ್ನು ಒಟ್ಟೊಟ್ಟಿಗೆ ಸವರಬೇಕು.

**عَنْ عَبْدِ اللَّهِ بْنِ عَمْرٍو رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ مَسَحَ بِرَأْسِهِ، فَأَدْخَلَ إِصْبَعَيْهِ السَّبَّاحَتَيْنِ فِي أُذُنَيْهِ، وَمَسَحَ بِإِبْهَامَيْهِ عَلَى ظَاهِرِ أُذُنَيْهِ،**

41 ಅಹ್ಮದ್, ಅಬೂದಾವೂದ್, ಅತ್ತಿರ್ಮಿದಿ, ಇಬ್ನ್ ಮಾಜ

وَبِالسَّبَّاحَتَيْنِ بَاطِنَ أُذُنَيْهِ.

ಅಬ್ದುಲ್ಲಾ ಇಬ್ನ್ ಅಮ್ರ್(ﷺ) ರಿಂದ ವರದಿ: ಪ್ರವಾದಿ-(ﷺ) ಯವರು ತಲೆಯನ್ನು ಸವರಿದರು. ನಂತರ ತಮ್ಮ ಎರಡು ತೋರುಬೆರಳುಗಳನ್ನು ಕಿವಿಗಳ ಒಳಗೆ ತೂರಿಸಿ-ದರು. ತಮ್ಮ ಎರಡು ಹೆಬ್ಬೆರಳುಗಳಿಂದ ಕಿವಿಯ ಹೊರ-ಭಾಗಗಳನ್ನು ಸವರಿದರು. ತೋರುಬೆರಳುಗಳಿಂದ ಕಿವಿ ಒಳಭಾಗಗಳನ್ನು ಸವರಿದರು.[42]

- ರುಮಾಲು ಧರಿಸಿದ್ದರೆ ಮುಂಗುರಳನ್ನು ಮತ್ತು ರುಮಾ-ಲನ್ನು ಸವರಿದರೆ ಸಾಕು.

عَنِ الْمُغِيرَةَ بْنِ شُعْبَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ تَوَضَّأَ، فَمَسَحَ بِنَاصِيَتِهِ، وَعَلَى الْعِمَامَةِ، وَعَلَى الْخُفَّيْنِ.

---

42 ಅಬೂದಾವೂದ್

ಅಲ್‌ಮುಗೀರ ಇಬ್ನ್ ಶುಅ್‌ಬ(﵁) ರಿಂದ ವರದಿ: ಪ್ರವಾದಿ(ﷺ) ಯವರು ವುದೂ ನಿರ್ವಹಿಸುವಾಗ ಮುಂಗುರುಳನ್ನು ಮತ್ತು ರುಮಾಲನ್ನು ಹಾಗೂ ಎರಡು ಪಾದರಕ್ಷೆಗಳನ್ನು ಸವರಿದರು.[43]

- ರುಮಾಲನ್ನು ಮಾತ್ರ ಸವರಿದರೂ ಸಾಕು.

عَنْ عَمْرِو بْنِ أُمَيَّةَ رَضِيَ اللَّهُ عَنْهُ قَالَ: رَأَيْتُ النَّبِيَّ صَلَّى اللَّهُ عَلَيْهِ وَسَلَّمَ يَمْسَحُ عَلَى عِمَامَتِهِ وَخُفَّيْهِ.

ಅಮ್ರ್ ಇಬ್ನ್ ಉಮಯ್ಯ(﵁) ರಿಂದ ವರದಿ: ಪ್ರವಾದಿ(ﷺ) ಯವರು ರುಮಾಲಿನ ಮೇಲೆ ಮತ್ತು ಪಾದರಕ್ಷೆಗಳ ಮೇಲೆ ಸವರುವುದನ್ನು ನಾನು ಕಂಡಿದ್ದೇನೆ.[44]

---

43 ಮುಸ್ಲಿಂ

44 ಅಲ್‌ಬುಖಾರಿ

## ಎರಡು ಕಾಲುಗಳನ್ನು ಹರಡು ಗಂಟುಗಳ ತನಕ ತೊಳೆಯುವುದು

- ನಂತರ ಕಾಲುಗಳನ್ನು ಹರಡು ಗಂಟುಗಳ ಸಹಿತ ತೊಳೆಯಬೇಕು. ಇದು ಕಡ್ಡಾಯವಾಗಿದೆ. ಏಕೆಂದರೆ ಅಲ್ಲಾಹು ಹೇಳುತ್ತಾನೆ:

﴿يَـٰٓأَيُّهَا ٱلَّذِينَ ءَامَنُوٓاْ إِذَا قُمۡتُمۡ إِلَى
ٱلصَّلَوٰةِ فَٱغۡسِلُواْ وُجُوهَكُمۡ وَأَيۡدِيَكُمۡ
إِلَى ٱلۡمَرَافِقِ وَٱمۡسَحُواْ بِرُءُوسِكُمۡ
وَأَرۡجُلَكُمۡ إِلَى ٱلۡكَعۡبَيۡنِۚ﴾

"ಓ ಸತ್ಯವಿಶ್ವಾಸಿಗಳೇ! ನೀವು ನಮಾಝ್ ನಿರ್ವಹಿಸಲು ಬಯಸಿದರೆ ನಿಮ್ಮ ಮುಖಗಳನ್ನು ತೊಳೆಯಿರಿ, ಕೈಗಳನ್ನು ಮೊಣಕೈಗಳವರೆಗೆ ತೊಳೆಯಿರಿ, ತಲೆಯನ್ನು ಸವರಿರಿ ಮತ್ತು ಕಾಲುಗಳನ್ನು ಹರಡುಗಂಟುಗಳ

ತನಕ ತೊಳೆಯಿರಿ."[45]

**عَنْ نُعَيْمِ بْنِ عَبْدِ اللَّهِ الْمُجْمِرِ قَالَ: رَأَيْتُ أَبَا هُرَيْرَةَ يَتَوَضَّأُ، قَالَ: ثُمَّ غَسَلَ رِجْلَهُ الْيُمْنَى حَتَّى أَشْرَعَ فِي السَّاقِ، ثُمَّ غَسَلَ رِجْلَهُ الْيُسْرَى حَتَّى أَشْرَعَ فِي السَّاقِ، ثُمَّ قَالَ: هَكَذَا رَأَيْتُ رَسُولَ اللَّهِ صَلَّى اللَّهُ عَلَيْهِ وَسَلَّمَ يَتَوَضَّأُ.**

ನುಐಮ್ ಇಬ್ನ್ ಅಬ್ದುಲ್ಲಾಹ್ ಅಲ್ ಮುಜ್ಮಿರ್(رضي الله عنه) ರಿಂದ ವರದಿ: ಅಬೂ ಹುರೈರ(رضي الله عنه) ವುದೂ ಮಾಡುವುದನ್ನು ನಾನು ಕಂಡಿದ್ದೇನೆ.... ನಂತರ ಅವರು ತಮ್ಮ ಬಲಗಾಲನ್ನು ಕಣಕಾಲುಗಳ ತನಕ ತೊಳೆದರು. ನಂತರ ಎಡಗಾಲನ್ನು ಕಣಕಾಲುಗಳ

45 ಸೂರ ಅಲ್‌ಮಾಇದ 6

ತನಕ ತೊಳೆದರು. ನಂತರ ಹೇಳಿದರು: “ಪ್ರವಾದಿ-(ﷺ) ಯವರು ಈ ರೀತಿ ವುದೂ ಮಾಡುವುದನ್ನು ನಾನು ಕಂಡಿದ್ದೇನೆ.”[46]

- ಕಾಲುಗಳನ್ನು ಮೂರು ಸಲ ತೊಳೆಯಬೇಕು. ಬಲಗಾ-ಲನ್ನು ಮೊದಲು ತೊಳೆಯಬೇಕು.

**عَنْ حُمْرَانَ أَنَّ عُثْمَانَ رَضِيَ اللَّهُ عَنْهُ غَسَلَ رِجْلَهُ الْيُمْنَى إِلَى الْكَعْبَيْنِ ثَلَاثَ مَرَّاتٍ، ثُمَّ غَسَلَ الْيُسْرَى مِثْلَ ذَلِكَ... ثُمَّ قَالَ: رَأَيْتُ رَسُولَ اللَّهِ صَلَّى اللَّهُ عَلَيْهِ وَسَلَّمَ تَوَضَّأَ نَحْوَ وُضُوئِي هَذَا.**

ಹುಮ್ರಾನ್(ؓ) ರಿಂದ ವರದಿ: ಉಸ್ಮಾನ್(ؓ) ರವರು ಬಲಗಾಲನ್ನು ಹರಡು ಗಂಟುಗಳ ತನಕ ಮೂರು

46 ಮುಸ್ಲಿಂ

ಸಲ ತೊಳೆದರು. ನಂತರ ಎಡಗಾಲನ್ನು ಅದೇ ರೀತಿ ತೊಳೆದರು. ನಂತರ ಹೇಳಿದರು: "ನಾನು ಈಗ ವುದೂ ನಿರ್ವಹಿಸಿದ ರೀತಿಯಲ್ಲಿಯೇ ಪ್ರವಾದಿ(ﷺ) ಯವರು ವುದೂ ನಿರ್ವಹಿಸುವುದನ್ನು ನಾನು ಕಂಡಿದ್ದೇನೆ."[47]

عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «إِذَا تَوَضَّأْتُمْ فَابْدَءُوا بِمَيَامِنِكُمْ.»

ಅಬೂ ಹುರೈರ(﵁) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ನೀವು ವುದೂ ನಿರ್ವಹಿಸು-ವಾಗ ಬಲಭಾಗದಿಂದ ಆರಂಭಿಸಿರಿ."[48]

- ಕಾಲುಗಳನ್ನು ಎಡಗೈಯಿಂದ ತೊಳೆಯಬೇಕು.

---

47 ಅಲ್‌ಬುಖಾರಿ, ಮುಸ್ಲಿಂ

48 ಅಹ್ಮದ್, ಅಬೂದಾವೂದ್, ಇಬ್ನ್ ಮಾಜ

عَنْ عَبْدِ خَيْرٍ أَنَّ عَلِيَّ بْنَ أَبِي طَالِبٍ رَضِيَ اللَّهُ عَنْه أَدْخَلَ يَدَهُ الْيُمْنَى فِي الْإِنَاءِ، ثُمَّ صَبَّ عَلَى رِجْلِهِ الْيُمْنَى، فَغَسَلَهَا ثَلَاثَ مَرَّاتٍ بِيَدِهِ الْيُسْرَى، ثُمَّ صَبَّ بِيَدِهِ الْيُمْنَى عَلَى رِجْلِهِ الْيُسْرَى، فَغَسَلَهَا ثَلَاثَ مَرَّاتٍ بِيَدِهِ الْيُسْرَى، ثُمَّ أَدْخَلَ يَدَهُ الْيُمْنَى فِي الْإِنَاءِ فَمَلَأَهَا مِنَ الْمَاءِ، ثُمَّ شَرِبَ مِنْهُ، ثُمَّ قَالَ: هَذَا طَهُورُ نَبِيِّ اللَّهِ صَلَّى اللَّهُ عَلَيْهِ وَسَلَّمَ. مَنْ سَرَّهُ أَنْ يَنْظُرَ إِلَى طُهُورِ رَسُولِ اللَّهِ صَلَّى اللَّهُ عَلَيْهِ وَسَلَّمَ فَهَذَا طُهُورُهُ.

ಅಬ್ದು ಖೈರ್(﵁) ರಿಂದ ವರದಿ: ಅಲಿ ಇಬ್ನ್ ಅಬೂ ತಾಲಿಬ್(﵁) ತನ್ನ ಬಲಗೈಯನ್ನು ಪಾತ್ರೆಯ ಒಳಗೆ ತೂರಿಸಿದರು. ನಂತರ (ಬಲಗೈಯಿಂದ ನೀರು ತೆಗೆದು)

ಬಲಗಾಲಿನ ಮೇಲೆ ಸುರಿದರು. ಅವರು ಅದನ್ನು ಮೂರು ಸಲ ತಮ್ಮ ಎಡಗೈಯಿಂದ ತೊಳೆದರು. ನಂತರ ಬಲಗೈಯಿಂದ ಎಡಗಾಲಿಗೆ ನೀರು ಸುರಿದರು. ಅದನ್ನು ಮೂರು ಸಲ ಎಡಗೈಯಿಂದ ತೊಳೆದರು. ನಂತರ ಬಲಗೈಯನ್ನು ಪಾತ್ರೆಗೆ ತೂರಿಸಿ ಅಂಗೈ ತುಂಬಾ ನೀರನ್ನು ತೆಗೆದು ಅದರಿಂದ ಸ್ವಲ್ಪ ಕುಡಿದರು. ನಂತರ ಹೇಳಿದರು: "ಪ್ರವಾದಿ(ﷺ) ಯವರು ವುದೂ ನಿರ್ವಹಿಸಿದ ವಿಧಾನವನ್ನು ನೋಡಲು ಯಾರಿಗಾದರೂ ಇಷ್ಟವಿದ್ದರೆ ನೋಡಿ, ಇದೇ ಅವರು ವುದೂ ನಿರ್ವಹಿಸಿದ ವಿಧಾನ".[49]

- ಕಿರುಬೆರಳಿನಿಂದ ಕಾಲು ಬೆರಳುಗಳ ಮಧ್ಯಭಾಗವನ್ನು ತಿಕ್ಕಬೇಕು.

عَنِ الْمُسْتَوْرِدِ بْنِ شَدَّادٍ رَضِيَ اللَّهُ عَنْهُ قَالَ:

49 ಇಬ್ನುಲ್ ಜಾರೂದ್

رَأَيْتُ رَسُولَ اللَّهِ صَلَّى اللَّهُ عَلَيْهِ وَسَلَّمَ إِذَا تَوَضَّأَ يُخَلِّلُ أَصَابِعَ رِجْلَيْهِ بِخِنْصَرِهِ.

ಅಲ್‌ಮುಸ್ತೌರಿದ್ ಇಬ್ನ್ ಶದ್ದಾದ್(ﷻ) ರಿಂದ ವರದಿ:. ಪ್ರವಾದಿ(ﷺ) ಯವರು ವುದೂ ನಿರ್ವಹಿಸುವಾಗ ತಮ್ಮ ಕಿರುಬೆರಳಿನಿಂದ ಕಾಲ್ಬೆರಳುಗಳ ಮಧ್ಯಭಾಗವನ್ನು ತಿ-ಕ್ಕುವುದನ್ನು ನಾನು ಕಂಡಿದ್ದೇನೆ."[50]

- ಹಿಮ್ಮಡಿಗಳನ್ನು ತೊಳೆಯಲು ವಿಶೇಷ ಗಮನ ನೀಡಬೇಕು.

عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ رَأَى رَجُلًا لَمْ يَغْسِلْ عَقِبَيْهِ، فَقَالَ: «وَيْلٌ لِلْأَعْقَابِ مِنَ النَّارِ.»

ಅಬೂ ಹುರೈರ(ﷻ) ರಿಂದ ವರದಿ: ಒಬ್ಬ ವ್ಯಕ್ತಿ ವುದೂ

---

50 ಅಹ್ಮದ್, ಅಬೂದಾವೂದ್, ಅತ್ತಿರ್ಮಿದಿ, ಇಬ್ನ್ ಮಾಜ

ನಿರ್ವಹಿಸುವಾಗ ಹಿಮ್ಮಡಿಗಳನ್ನು ತೊಳೆಯದೆ ಬಿಟ್ಟಿರುವುದನ್ನು ಪ್ರವಾದಿ(ﷺ) ಯವರು ಕಂಡರು. ಆಗ ಅವರು ಹೇಳಿದರು: "ಹಿಮ್ಮಡಿಗಳಿಗೆ ನರಕಾಗ್ನಿಯ ಶಿಕ್ಷೆ ಕಾದಿದೆ."[51]

- ಪಾದಗಳ ಹೊರಭಾಗವನ್ನು ತೊಳೆಯಬೇಕು.

عَنْ عُمَرَ بْنِ الْخَطَّابِ رَضِيَ اللَّهُ عَنْهُ أَنَّ رَجُلاً تَوَضَّأَ، فَتَرَكَ مَوْضِعَ ظُفُرٍ عَلَى قَدَمِهِ، فَأَبْصَرَهُ النَّبِيُّ صَلَّى اللَّهُ عَلَيْهِ وَسَلَّمَ فَقَالَ: «ارْجِعْ، فَأَحْسِنْ وُضُوءَكَ.» فَرَجَعَ، ثُمَّ صَلَّى.

ಉಮರ್ ಇಬ್ನುಲ್ ಖತ್ತಾಬ್(ರ) ರಿಂದ ವರದಿ: ಒಬ್ಬ ವ್ಯಕ್ತಿ ವುದೂ ನಿರ್ವಹಿಸುತ್ತಾ ಪಾದದಲ್ಲಿ ಒಂದು

51 ಅಲ್‌ಬುಖಾರಿ, ಮುಸ್ಲಿಂ

ಉಗುರಿನ ಗಾತ್ರದಷ್ಟು ಸ್ಥಳವನ್ನು ತೊಳೆಯದೇ ಬಿಟ್ಟಿ-ರುವುದನ್ನು ಪ್ರವಾದಿ(ﷺ) ಯವರು ಕಂಡರು. ಆಗ ಅವರು ಹೇಳಿದರು: “ಹೋಗು. ಉತ್ತಮ ರೀತಿಯಲ್ಲಿ ವುದೂ ನಿರ್ವಹಿಸು.” ಆ ವ್ಯಕ್ತಿ ಹೋಗಿ ವುದೂ ನಿರ್ವ-ಹಿಸಿದ ನಂತರ ನಮಾಝ್ ಮಾಡಿದರು.[52]

- ಶುದ್ಧಿಯಲ್ಲಿರುವಾಗಲೇ ಪಾದರಕ್ಷೆ ಧರಿಸಿದ್ದರೆ ಅವುಗಳ ಮೇಲೆ ಸವರಬಹುದು.

عَنْ عَلِيِّ بْنِ أَبِي طَالِبٍ رَضِيَ اللَّهُ عَنْهُ قَالَ: جَعَلَ رَسُولُ اللَّهِ صَلَّى اللَّهُ عَلَيْهِ وَسَلَّمَ ثَلَاثَةَ أَيَّامٍ وَلَيَالِيَهُنَّ لِلْمُسَافِرِ، وَيَوْمًا وَلَيْلَةً لِلْمُقِيمِ. أَيْ فِي الْمَسْحِ عَلَى الْخُفَّيْنِ.

ಅಲಿ ಇಬ್ನ್ ಅಬೂ ತಾಲಿಬ್(رضي الله عنه) ರಿಂದ ವರದಿ: ಪ್ರ-

52 ಮುಸ್ಲಿಂ

ವಾದಿ(ﷺ) ಯವರು ಪ್ರಯಾಣಿಕರಿಗೆ ಮೂರು ದಿನ ರಾತ್ರಿ ಮತ್ತು ಪ್ರಯಾಣಿಕರಲ್ಲದವರಿಗೆ ಒಂದು ದಿನ ರಾತ್ರಿಯನ್ನು ನಿಶ್ಚಯಿಸಿದರು. ಅಂದರೆ ಪಾದರಕ್ಷೆಗಳ ಮೇಲೆ ಸವರಲು.[53]

ಅಲಿ ಇಬ್ನ್ ಅಬೂ ತಾಲಿಬ್(رضي الله عنه) ರಿಂದ ಅಬೂದಾ-ವೂದ್ ವರದಿ ಮಾಡಿದ ಹದೀಸ್‌ನಲ್ಲಿ ಹೀಗಿದೆ.

لَوْ كَانَ الدِّينُ بِالرَّأْيِ لَكَانَ أَسْفَلُ الْخُفِّ أَوْلَى بِالْمَسْحِ مِنْ أَعْلَاهُ، وَقَدْ رَأَيْتُ رَسُولَ اللَّهِ صَلَّى اللَّهُ عَلَيْهِ وَسَلَّمَ يَمْسَحُ عَلَى ظَاهِرِ خُفَّيْهِ.

“ಒಂದು ವೇಳೆ ಧಾರ್ಮಿಕ ನಿಯಮಗಳು ಅಭಿಪ್ರಾಯ-ಗಳ ಆಧಾರದ ಮೇಲೆ ನಿರ್ಮಿತವಾಗಿರುತ್ತಿದ್ದರೆ ಪಾದ-

53 ಮುಸ್ಲಿಂ

ರಕ್ಷೆಗಳ ಮೇಲ್ಭಾಗಕ್ಕಿಂತಲೂ ಅವುಗಳ ಅಡಿಭಾಗಗಳನ್ನು ಸವರುವುದು ಹೆಚ್ಚು ಯೋಗ್ಯವಾಗಿರುತ್ತಿತ್ತು. ಆದರೆ ಪ್ರವಾದಿ(ﷺ) ಯವರು ಪಾದರಕ್ಷೆಗಳ ಮೇಲ್ಭಾಗವನ್ನು ಸವರುವುದನ್ನು ನಾನು ಕಂಡಿದ್ದೇನೆ."

## ತರ್ತೀಬ್ (ಒಂದರ ನಂತರ ಒಂದನ್ನು ನಿರ್ವಹಿಸುವುದು)

- ಮೇಲೆ ವಿವರಿಸಿದ ರೀತಿಯಲ್ಲಿಯೇ ಕ್ರಮಾನುಕ್ರಮವಾಗಿ ವುದೂ ನಿರ್ವಹಿಸಬೇಕು. ಇದು ಕಡ್ಡಾಯವಾಗಿದೆ.

عَنْ رِفَاعَةَ بْنِ رَافِعٍ رَضِيَ اللَّهُ عَنْهُ أَنَّ رَسُولَ اللَّهِ صَلَّى اللَّهُ عَلَيْهِ وَسَلَّمَ قَالَ لِلْمُسِيءِ صَلَاتِهِ: «تَوَضَّأْ كَمَا أَمَرَكَ اللَّهُ جَلَّ وَعَزَّ.»

ರಿಫಾಅ ಇಬ್ನ್ ರಾಫಿಅ್(رضي الله عنه) ರಿಂದ ವರದಿ: ಕೆಟ್ಟ ರೀತಿ-

ಯಲ್ಲಿ ನಮಾಝ್ ನಿರ್ವಹಿಸಿದ ವ್ಯಕ್ತಿಯೊಂದಿಗೆ ಪ್ರವಾದಿ(ﷺ) ಯವರು ಹೇಳಿದರು: “ಅಲ್ಲಾಹು ಆಜ್ಞಾಪಿಸಿದ ರೀತಿಯಲ್ಲಿಯೇ ವುದೂ ನಿರ್ವಹಿಸಿರಿ.”[54]

## ಮುವಾಲಾತ್ (ನಡುವೆ ಹೆಚ್ಚು ಅಂತರವಿಲ್ಲದೆ ಒಂದರ ನಂತರ ಒಂದು ನಿರ್ವಹಿಸುವುದು)

- ವುದೂವಿನ ಅಂಗಗಳನ್ನು ತೊಳೆಯುವಾಗ ಒಂದನ್ನು ತೊಳೆದು ಹೆಚ್ಚು ತಡಮಾಡದೆ ಇನ್ನೊಂದನ್ನು ತೊಳೆಯಬೇಕು. ಅವುಗಳ ಮಧ್ಯೆ ದೀರ್ಘ ಸಮಯದ ಅಂತರವಿರಬಾರದು. ದೀರ್ಘ ಸಮಯದ ಅಂತರವುಂಟಾದರೆ ವುದೂವನ್ನು ಪುನರಾರಂಭಿಸಬೇಕು.

عَنْ خَالِدِ بْنِ مَعْدَانٍ عَنْ بَعْضِ أَصْحَابِ النَّبِيِّ صَلَّى اللَّهُ عَلَيْهِ وَسَلَّمَ أَنَّ النَّبِيَّ صَلَّى اللَّهُ عَلَيْهِ وَسَلَّمَ رَأَى رَجُلاً يُصَلِّي، وَفِي

54 ಅಬೂದಾವೂದ್, ಅತ್ತಿರ್ಮಿದಿ

ظَهْرِ قَدَمِهِ لُمْعَةٌ قَدْرُ الدِّرْهَمِ لَمْ يُصِبْهَا الْمَاءُ، فَأَمَرَهُ النَّبِيُّ صَلَّى اللَّهُ عَلَيْهِ وَسَلَّمَ أَنْ يُعِيدَ الْوُضُوءَ وَالصَّلَاةَ.

ಖಾಲಿದ್ ಇಬ್ನ್ ಮಅ್‌ದಾನ್(﵁) ರವರು ಕೆಲವು ಸಹಾಬಿಗಳಿಂದ ವರದಿ ಮಾಡುತ್ತಾರೆ. ಒಬ್ಬ ವ್ಯಕ್ತಿ ನಮಾಝ್ ಮಾಡುವುದನ್ನು ಪ್ರವಾದಿ(ﷺ) ಯವರು ಕಂಡರು. ಅವರ ಒಂದು ಪಾದದ ಹಿಂಭಾಗದಲ್ಲಿ ಒಂದು ನಾಣ್ಯದ ಗಾತ್ರದಷ್ಟು ಸಣ್ಣ ಸ್ಥಳವಿತ್ತು. ಅದಕ್ಕೆ ನೀರು ತಾಗಿರಲಿಲ್ಲ. ಆಗ ಪ್ರವಾದಿ(ﷺ) ಯವರು ಆ ವ್ಯಕ್ತಿಯೊಡನೆ ವುದೂ ಮತ್ತು ನಮಾಝನ್ನು ಪುನಃ ನಿ-ರ್ವಹಿಸಲು ಆದೇಶಿಸಿದರು.[55]

55 ಅಬೂದಾವೂದ್

## ಎಲ್ಲ ಅಂಗಗಳನ್ನು ಒಂದೊಂದು ಬಾರಿ ತೊಳೆಯುವುದು

- ವುದೂ ನಿರ್ವಹಿಸುವಾಗ ಎಲ್ಲ ಅಂಗಗಳನ್ನು ಒಂದೊಂದು ಬಾರಿ ತೊಳೆಯಬಹುದು.

عَنِ ابْنِ عَبَّاسٍ رَضِيَ اللَّهُ عَنْهُ قَالَ: تَوَضَّأَ النَّبِيُّ صَلَّى اللَّهُ عَلَيْهِ وَسَلَّمَ مَرَّةً مَرَّةً.

ಇಬ್ನ್ ಅಬ್ಬಾಸ್(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಅಂಗಗಳನ್ನು ಒಂದೊಂದು ಬಾರಿ ತೊಳೆ-ಯುತ್ತಾ ವುದೂ ನಿರ್ವಹಿಸಿದರು.[56]

## ಎಲ್ಲ ಅಂಗಗಳನ್ನು ಎರಡೆರಡು ಬಾರಿ ತೊಳೆಯುವುದು

- ವುದೂ ನಿರ್ವಹಿಸುವಾಗ ಎಲ್ಲ ಅಂಗಗಳನ್ನು ಎರಡೆರ-ಡು ಬಾರಿಯೂ ತೊಳೆಯಬಹುದು.

56 ಅಲ್‌ಬುಖಾರಿ

عَنْ عَبْدِ اللَّهِ بْنِ زَيْدٍ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ تَوَضَّأَ مَرَّتَيْنِ مَرَّتَيْنِ.

ಅಬ್ದುಲ್ಲಾಹ್ ಇಬ್ನ್ ಝೈದ್(﵁) ರಿಂದ ವರದಿ: ಪ್ರವಾದಿ(ﷺ) ಯವರು ಅಂಗಗಳನ್ನು ಎರಡೆರಡು ಬಾರಿ ತೊಳೆಯುತ್ತಾ ವುದೂ ನಿರ್ವಹಿಸಿದರು.[57]

## ಮೂರು ಬಾರಿಗಿಂತ ಹೆಚ್ಚು ತೊಳೆಯಬಾರದು

- ಅಂಗಗಳನ್ನು ಮೂರು ಬಾರಿಗಿಂತ ಹೆಚ್ಚು ಬಾರಿ ತೊಳೆಯಬಾರದು.

عَنْ عَبْدِ اللَّهِ بْنِ عَمْرٍو رَضِيَ اللَّهُ عَنْهُ قَالَ: جَاءَ أَعْرَابِيٌّ إِلَى النَّبِيِّ صَلَّى اللَّهُ عَلَيْهِ وَسَلَّمَ يَسْأَلُهُ عَنِ الْوُضُوءِ. فَأَرَاهُ ثَلَاثًا

57 ಅಲ್‌ಬುಖಾರಿ

ثَلَاثًا، ثُمَّ قَالَ: «هَذَا الْوُضُوءُ، فَمَنْ زَادَ عَلَى هَذَا فَقَدْ أَسَاءَ، وَتَعَدَّى، وَظَلَمَ.»

ಅಬ್ದುಲ್ಲಾಹ್ ಇಬ್ನ್ ಅಮ್ರ್(ﷺ) ರಿಂದ ವರದಿ: ವುದೂ ನಿರ್ವಹಿಸುವುದು ಹೇಗೆಂದು ಕಲಿಯಲು ಒಬ್ಬ ಅಲೆಮಾರಿ ಅರಬಿ ಪ್ರವಾದಿ(ﷺ) ಯವರ ಬಳಿಗೆ ಬಂದರು. ಪ್ರವಾದಿ(ﷺ) ಯವರು ಅವರಿಗೆ ಅಂಗಗಳನ್ನು ಮೂರು ಮೂರು ಸಲ ತೊಳೆಯುವ ಮೂಲಕ ವುದೂ ನಿರ್ವಹಿಸುವುದನ್ನು ತೋರಿಸಿದ ನಂತರ ಹೇಳಿದರು: "ಇದೇ ಸರಿಯಾದ ವುದೂ. ಯಾರಾದರೂ ಇದಕ್ಕಿಂತ ಹೆಚ್ಚು ನಿರ್ವಹಿಸಿದರೆ (ಮೂರಕ್ಕಿಂತ ಹೆಚ್ಚು ಬಾರಿ ತೊಳೆದರೆ) ಅವನು ಕೆಟ್ಟದ್ದನ್ನು, ಅತಿರೇಕವನ್ನು ಮತ್ತು ಅನ್ಯಾಯವನ್ನು ಎಸಗಿದ್ದಾನೆ."[58]

58 ಅಹ್ಮದ್, ಅಬೂದಾವೂದ್, ಅನ್ನಸಾಈ, ಇಬ್ನ್ ಮಾಜ

## ಮಿಶ್ರ ರೀತಿಯಲ್ಲಿ ವುದೂ ನಿರ್ವಹಿಸುವುದು

- ಅಂಗಗಳನ್ನು ತೊಳೆಯುವಾಗ ಕೆಲವು ಅಂಗಗಳನ್ನು ಒಂದು ಸಲ ಇನ್ನು ಕೆಲವು ಅಂಗಗಳನ್ನು ಎರಡು ಅಥವಾ ಮೂರು ಸಲ ತೊಳೆಯುವ ಮೂಲಕ ವುದೂ ನಿರ್ವಹಿಸಬಹುದು.

**عَنْ عَبْدِ اللَّهِ بْنِ زَيْدٍ رَضِيَ اللَّهُ عَنْهُ أَنَّهُ غَسَلَ وَجْهَهُ ثَلَاثًا، ثُمَّ أَدْخَلَ يَدَهُ، فَاسْتَخْرَجَهَا فَغَسَلَ يَدَيْهِ إِلَى الْمِرْفَقَيْنِ مَرَّتَيْنِ مَرَّتَيْنِ، ثُمَّ أَدْخَلَ يَدَهُ، فَاسْتَخْرَجَهَا فَمَسَحَ بِرَأْسِهِ، فَأَقْبَلَ بِيَدَيْهِ وَأَدْبَرَ، ثُمَّ غَسَلَ رِجْلَيْهِ إِلَى الْكَعْبَيْنِ، ثُمَّ قَالَ: هَكَذَا كَانَ وُضُوءُ رَسُولِ اللَّهِ صَلَّى اللَّهُ عَلَيْهِ وَسَلَّمَ.**

ಅಬ್ದುಲ್ಲಾಹ್ ಇಬ್ನ್ ಝೈದ್(ﷺ) ರಿಂದ ವರದಿ: ಅವರು

ತಮ್ಮ ಮುಖವನ್ನು ಮೂರು ಸಲ ತೊಳೆದರು. ನಂತರ ಕೈಯನ್ನು ನೀರಿಗೆ ತೂರಿಸಿ ಹೊರತೆಗೆದು ಎರಡು ಕೈಗಳನ್ನು ಮೊಣಕೈಗಳ ತನಕ ಎರಡೆರಡು ಸಲ ತೊಳೆದರು. ನಂತರ ಕೈಯನ್ನು ನೀರಿನೊಳಗೆ ತೂರಿಸಿ ಹೊರತೆಗೆದು ತಲೆಯನ್ನು ಸವರಿದರು. ಅಂದರೆ ತಲೆಯನ್ನು ಮುಂಭಾಗದಿಂದ ಹಿಂಭಾಗದ ತನಕ ಮತ್ತು ಹಿಂಭಾಗದಿಂದ ಮುಂಭಾಗದ ತನಕ ಸವರಿದರು. ನಂತರ ಎರಡು ಕಾಲುಗಳನ್ನು ಹರಡು ಗಂಟುಗಳ ತನಕ ತೊಳೆದರು. ನಂತರ ಹೇಳಿದರು: "ಪ್ರವಾದಿ(ﷺ) ಯವರ ವುದೂ ಇದೇ ರೀತಿಯಾಗಿತ್ತು."[59]

## ವುದೂ ನಿರ್ವಹಿಸುವಾಗ ನೀರನ್ನು ಮಿತವಾಗಿ ಬಳಸುವುದು

- ಒಂದು ಮುದ್ದ್[60] ನೀರಿನಿಂದ ವುದೂ ನಿರ್ವಹಿಸು-

59 ಅಲ್‌ಬುಖಾರಿ, ಮುಸ್ಲಿಂ

60 ಒಂದು ಮುದ್ದ್ ಎಂದರೆ ಒಬ್ಬ ಆರೋಗ್ಯವಂತ ವ್ಯಕ್ತಿ ತನ್ನ ಎರಡು

ವುದು

عَنْ أَنَسِ بْنِ مَالِكٍ رَضِيَ اللَّهُ عَنْهُ قَالَ: كَانَ النَّبِيُّ صَلَّى اللَّهُ عَلَيْهِ وَسَلَّمَ يَتَوَضَّأُ بِالْمُدِّ، وَيَغْتَسِلُ بِالصَّاعِ، إِلَى خَمْسَةِ أَمْدَادٍ.

ಅನಸ್(﵁) ರಿಂದ ವರದಿ: ಪ್ರವಾದಿ(ﷺ) ಯವರು ಒಂದು ಮುದ್ದ್ ನೀರಿನಿಂದ ವುದೂ ನಿರ್ವಹಿಸುತ್ತಿದ್ದರು ಮತ್ತು ಒಂದು ಸಾಅ್[61] ದಿಂದ ಐದು ಮುದ್ದ್‌ವರೆಗಿನ ನೀರಿನಲ್ಲಿ ಸ್ನಾನ ಮಾಡುತ್ತಿದ್ದರು.[62]

- ನೀರನ್ನು ಪೋಲು ಮಾಡಬಾರದು.

عَنْ عَبْدِ اللَّهِ بْنِ مُغَفَّلٍ رَضِيَ اللَّهُ عَنْهُ أَنَّ

---

ಕೈಗಳನ್ನು ಜೋಡಿಸಿ ಬಾಚುವಷ್ಟು ಪ್ರಮಾಣ

61 ಒಂದು ಸಾಅ್ ಎಂದರೆ ಐದು ಮುದ್ದ್‌ಗಳು

62 ಮುಸ್ಲಿಂ

النَّبِيَّ صَلَّى اللَّهُ عَلَيْهِ وَسَلَّمَ قَالَ: «إِنَّهُ سَيَكُونُ فِي هَذِهِ الْأُمَّةِ قَوْمٌ يَعْتَدُونَ فِي الطَّهُورِ وَالدُّعَاءِ.»

ಅಬ್ದುಲ್ಲಾ ಇಬ್ನ್ ಮುಗಫ್ಫಲ್(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ಶುದ್ಧೀಕರಣ ಮತ್ತು ಪ್ರಾರ್ಥನೆಯ ವಿಷಯದಲ್ಲಿ ಹದ್ದು ಮೀರುವ ಒಂದು ಜನಸಮೂಹವು ಈ ಸಮುದಾಯದಲ್ಲಿ ಬರಲಿದ್ದಾರೆ."[63]

## ವುದೂ ನಿರ್ವಹಿಸಿದ ನಂತರ ಪ್ರಾರ್ಥಿಸುವುದು

- ವುದೂ ನಿರ್ವಹಿಸಿದ ನಂತರ ಹದೀಸಿನಲ್ಲಿ ಬಂದ ಪ್ರಾರ್ಥನೆಯನ್ನು ಪ್ರಾರ್ಥಿಸಬೇಕು.

عَنْ عُمَرَ بْنِ الْخَطَّابِ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «مَا

63 ಅಹ್ಮದ್, ಅಬೂದಾವೂದ್

مِنْكُمْ مِنْ أَحَدٍ يَتَوَضَّأُ فَيُبْلِغُ — أَوْ فَيُسْبِغُ
— الْوَضُوءَ، ثُمَّ يَقُولُ: أَشْهَدُ أَنْ لَا إِلَهَ إِلَّا
اللَّهُ، وَأَنَّ مُحَمَّدًا عَبْدُ اللَّهِ وَرَسُولُهُ إِلَّا
فُتِحَتْ لَهُ أَبْوَابُ الْجَنَّةِ الثَّمَانِيَةُ يَدْخُلُ مِنْ
أَيِّهَا شَاءَ.» وزاد الترمذي: «اللَّهُمَّ اجْعَلْنِي
مِنَ التَّوَّابِينَ، وَاجْعَلْنِي مِنَ الْمُتَطَهِّرِينَ».

ಉಮರ್ ಇಬ್ನುಲ್ ಖತ್ತಾಬ್(﵁) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ನಿಮ್ಮಲ್ಲೊಬ್ಬರು ಅತ್ಯುತ್ತಮ ರೀತಿಯಲ್ಲಿ ವುದೂ ನಿರ್ವಹಿಸಿ ನಂತರ 'ಅಶ್‌ಹದು ಅನ್ ಲಾ ಇಲಾಹ ಇಲ್ಲಲ್ಲಾಹ್, ವಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ' ಎಂದು ಹೇಳಿದರೆ ಅವರಿಗೆ ಸ್ವರ್ಗದ ಎಂಟು ಬಾಗಿಲುಗಳು ತೆರೆಯದೆ ಇರುವುದಿಲ್ಲ. ಅವುಗಳಲ್ಲಿ ಯಾವ ಬಾಗಿಲಿನ ಮೂಲಕವೂ ಅವರಿಗೆ ಸ್ವರ್ಗವನ್ನು ಪ್ರವೇ-

ಶಿಸಬಹುದು."[64]

ಅತ್ತಿರ್ಮಿದಿಯಲ್ಲಿ ಹೆಚ್ಚುವರಿಯಾಗಿ ಹೀಗೆ ವರದಿಯಾ-
ಗಿದೆ. 'ಅಲ್ಲಾಹುಮ್ಮಜ್‌ಅಲ್‌ನೀ ಮಿನ ತ್ತವ್ವಾಬೀನ್,
ವಜ್‌ಅಲ್‌ನೀ ಮಿನಲ್ ಮುತತಹ್ಹಿರೀನ್.'

عَنْ أَبِي سَعِيدٍ الْخُدْرِيِّ رَضِيَ اللَّهُ عَنْهُ
أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «مَنْ
تَوَضَّأَ، فَأَسْبَغَ الْوُضُوءَ، ثُمَّ قَالَ عِنْدَ فَرَاغِهِ
مِنْ وُضُوئِهِ: سُبْحَانَكَ اللَّهُمَّ وَبِحَمْدِكَ،
أَشْهَدُ أَنْ لَا إِلَهَ إِلَّا أَنْتَ، أَسْتَغْفِرُكَ وَأَتُوبُ
إِلَيْكَ، خُتِمَ عَلَيْهَا بِخَاتَمٍ، فَوُضِعَتْ تَحْتَ
الْعَرْشِ، فَلَمْ يُكْسَرْ إِلَى يَوْمِ الْقِيَامَةِ.»

ಅಬೂ ಸಈದ್ ಅಲ್‌ಖುದ್ರಿ(ﷺ) ರಿಂದ ವರದಿ: ಪ್ರ-

64 ಮುಸ್ಲಿಂ

ವಾದಿ(ﷺ) ಯವರು ಹೇಳಿದರು: “ಯಾರು ಅತ್ಯುತ್ತಮವಾಗಿ ವುದೂ ನಿರ್ವಹಿಸಿ, ನಂತರ ಕೊನೆಯಲ್ಲಿ ‘ಸುಬ್‌ಹಾನಕಲ್ಲಾಹುಮ್ಮ ವಬಿಹಮ್ದಿಕ, ಅಶ್‌ಹದು ಅನ್ ಲಾ ಇಲಾಹ ಇಲ್ಲಾ ಅನ್ತ, ಅಸ್ತಗ್ಫಿರುಕ ವಅತೂಬು ಇಲೈಕ’ ಎಂದು ಹೇಳಿದರೆ ಆ ಪ್ರಾರ್ಥನೆಯ ಮೇಲೆ ಮುದ್ರೆ ಹಾಕಿ ಅದನ್ನು ಅಲ್ಲಾಹನ ಸಿಂಹಾಸನದ (ಅರ್ಶ್) ಕೆಳಭಾಗದಲ್ಲಿ ಇಡಲಾಗುವುದು. ಪುನರುತ್ಥಾನದ ತನಕ ಅದನ್ನು ತೆರೆಯಲಾಗುವುದಿಲ್ಲ.[65]

## ವುದೂ ನಿರ್ವಹಿಸಿದ ನಂತರ ಎರಡು ರಕಅತ್ ನಮಾಝ್ ಮಾಡುವುದು

- ವುದೂ ನಿರ್ವಹಿಸಿದ ನಂತರ ಅತ್ಯಂತ ಭಯ ಭಕ್ತಿಯಿಂದ ಕೂಡಿದ ಎರಡು ರಕಅತ್ ನಮಾಝ್ ನಿರ್ವಹಿಸಬೇಕು.

65 ಇಬ್ನು ಸ್ಸುನ್ನಿ ತಮ್ಮ ಅಮಲುಲ್ ಯೌಮಿ ವಲ್ಲೈಲದಲ್ಲಿ

عَنْ عُقْبَةَ بْنِ عَامِرٍ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ قَالَ: «مَا مِنْ مُسْلِمٍ يَتَوَضَّأُ، فَيُحْسِنُ وُضُوءَهُ، ثُمَّ يَقُومُ فَيُصَلِّي رَكْعَتَيْنِ، مُقْبِلٌ عَلَيْهِمَا بِقَلْبِهِ وَوَجْهِهِ إِلَّا وَجَبَتْ لَهُ الْجَنَّةُ.»

ಉಕ್ಬ ಇಬ್ನ್ ಆಮಿರ್(﵁) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ಒಬ್ಬ ಮುಸಲ್ಮಾನನು ಅತ್ಯುತ್ತಮ ರೀತಿಯಲ್ಲಿ ವುದೂ ನಿರ್ವಹಿಸಿ, ನಂತರ ಹೃದಯ ಮತ್ತು ಮುಖವನ್ನು ಕೇಂದ್ರೀಕರಿಸಿ ಎರಡು ರಕಅತ್ ನಮಾಝ್ ನಿರ್ವಹಿಸಿದರೆ ಅವನಿಗೆ ಸ್ವರ್ಗವು ಕಡ್ಡಾಯವಾಗದೆ ಇರುವುದಿಲ್ಲ."[66]

عَنْ عُثْمَانَ بْنِ عَفَّانٍ رَضِيَ اللَّهُ عَنْهُ أَنَّ

66 ಮುಸ್ಲಿಂ

النَّبِيَّ صَلَّى اللَّهُ عَلَيْهِ وَسَلَّمَ قَالَ: «مَنْ تَوَضَّأَ نَحْوَ وُضُوئِي هَذَا، ثُمَّ قَامَ فَرَكَعَ رَكْعَتَيْنِ، لَا يُحَدِّثُ فِيهِمَا نَفْسَهُ غُفِرَ لَهُ مَا تَقَدَّمَ مِنْ ذَنْبِهِ.»

ಉಸ್ಮಾನ್ ಇಬ್ನ್ ಅಫ್ಫಾನ್(ﷺ) ರಿಂದ ವರದಿ: ಪ್ರವಾದಿ(ﷺ) ಯವರು ಹೇಳಿದರು: "ನಾನು ವುದೂ ನಿರ್ವಹಿಸಿದ ಇದೇ ವಿಧಾನದಲ್ಲಿ ವುದೂ ನಿರ್ವಹಿಸಿ, ನಂತರ ಐಹಿಕವಾದ ಯಾವುದೇ ವಿಚಾರಗಳ ಬಗ್ಗೆ ಚಿಂತಿಸದೆ ಎರಡು ರಕಅತ್ ನಮಾಝ್ ನಿರ್ವಹಿಸಿದರೆ ಅವನ ಗತ ಪಾಪಗಳೆಲ್ಲವೂ ಕ್ಷಮಿಸಲಾಗುವುದು."[67]

- ಇಷ್ಟವಿದ್ದರೆ ಎರಡಕ್ಕಿಂತಲೂ ಹೆಚ್ಚು ರಕ್‌ಅತ್ ನಿರ್ವಹಿಸಬಹುದು.

---

67 ಅಲ್‌ಬುಖಾರಿ, ಮುಸ್ಲಿಂ

عَنْ أَبِي هُرَيْرَةَ رَضِيَ اللَّهُ عَنْهُ قَالَ: قَالَ رَسُولُ اللَّهِ صَلَّى اللَّهُ عَلَيْهِ وَسَلَّمَ لِبِلَالٍ عِنْدَ صَلَاةِ الْغَدَاةِ: «يَا بِلَالُ حَدِّثْنِي بِأَرْجَى عَمَلٍ عَمِلْتَهُ عِنْدَكَ فِي الْإِسْلَامِ مَنْفَعَةً، فَإِنِّي سَمِعْتُ اللَّيْلَةَ خَشْفَ نَعْلَيْكَ بَيْنَ يَدَيَّ فِي الْجَنَّةِ.» قَالَ بِلَالٌ: مَا عَمِلْتُ عَمَلًا فِي الْإِسْلَامِ أَرْجَى عِنْدِي مَنْفَعَةً، مِنْ أَنِّي لَا أَتَطَهَّرُ طُهُورًا تَامًّا، فِي سَاعَةٍ مِنْ لَيْلٍ وَلَا نَهَارٍ، إِلَّا صَلَّيْتُ بِذَلِكَ الطُّهُورِ، مَا كَتَبَ اللَّهُ لِي أَنْ أُصَلِّيَ.»

ಅಬೂ ಹುರೈರ(﵁) ರಿಂದ ವರದಿ: ಪ್ರವಾದಿ(ﷺ) ಯವರು ಫಜ್ರ್ ನಮಾಝಿನ ಸಮಯದಲ್ಲಿ ಬಿಲಾ-ಲ್‌ರೊಂದಿಗೆ ಕೇಳಿದರು. "ಓ ಬಿಲಾಲ್, ತಾವು

ಇಸ್ಲಾಮ್ ಸ್ವೀಕರಿಸಿದ ಬಳಿಕ ಅತ್ಯುನ್ನತ ಪ್ರತಿಫಲ ಸಿ-
ಗಬೇಕೆಂಬ ಅತೀವ ನಿರೀಕ್ಷೆಯಿಂದ ನಿರ್ವಹಿಸಿದ ಆ
ಕರ್ಮದ ಬಗ್ಗೆ ನನಗೆ ತಿಳಿಸಿ ಕೊಡಿ. ಖಂಡಿತವಾಗಿ-
ಯೂ ನಿನ್ನೆ ರಾತ್ರಿ ಸ್ವರ್ಗದಲ್ಲಿ ನನ್ನ ಮುಂಭಾಗದಲ್ಲಿ
ನಾನು ತಮ್ಮ ಹೆಜ್ಜೆ ಸಪ್ಪಳವನ್ನು ಕೇಳಿದ್ದೆ." ಬಿಲಾಲ್
ಹೇಳಿದರು: "ನಾನು ಇಸ್ಲಾಂ ಸ್ವೀಕರಿಸಿದ ಬಳಿಕ ಅತ್ಯು-
ನ್ನತ ಪ್ರತಿಫಲ ಸಿಗಬೇಕೆಂಬ ಅತೀವ ನಿರೀಕ್ಷೆಯಿಂದ
ಯಾವುದೇ ಕರ್ಮವನ್ನು ಮಾಡಿಲ್ಲ. ಆದರೆ ನಾನು ರಾ-
ತ್ರಿಯಾಗಲಿ ಹಗಲಾಗಲಿ ಪೂರ್ಣ ರೀತಿಯಲ್ಲಿ ವುದೂ
ನಿರ್ವಹಿಸಿದರೆ, ನಂತರ ಆ ವುದೂವಿನಲ್ಲಿ ಅಲ್ಲಾಹು
ಇಚ್ಛಿಸಿದಷ್ಟು ಸಂಖ್ಯೆಯ ನಮಾಝ್ ನಿರ್ವಹಿಸುತ್ತಿದ್ದೆ."[68]

---

68 ಅಲ್‌ಬುಖಾರಿ, ಮುಸ್ಲಿಂ

